# ಕೊರವಂಜಿ

*Koravanji*

ನವೆಂಬರ್

೧೯೫೭



ಸಂಪಾದಕರು :

ಶ್ರೀ|| ರಾ. ಶಿ.

ಬರಹಗಾರರು :

ಶ್ರೀ|| ಕಾಳಿ ಪ್ರಸಾದ್
ಶ್ರೀ|| ರಾಮಿ
ಶ್ರೀ|| ಅ. ರಾ ಸೇ.
ಶ್ರೀ|| ಹಾ. ರಾ.
ಶ್ರೀ|| ಕೇಫ
ಶ್ರೀ|| ಬಚ್ಚ
ಶ್ರೀ|| ಪ್ರಕಾಶ್

ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ ಕೇವಲ ನಾಲ್ಕಾಣೆ

# ಅನುಭವದಿಂದ ಬಂದ ಜ್ಞಾನ

ಶ್ರೀಗಂಧದ ಮರಗಳನ್ನು ಸಮೃದ್ಧವಾಗಿ ಬೆಳೆಸುವುದರ ರಹಸ್ಯವು ನೂರಾರು ವರ್ಷಗಳ ಅನುಭವವಾದ ಮೇಲೂ ಕೂಡಾ ಇನ್ನೂ ಮೈಸೂರು ಸೀಮೆಯೊಂದರ ವಶದಲ್ಲಿಯೇ ಇರುವ ಸ್ವತ್ತಾಗಿದೆ. ಮೈಸೂರು ಸರಕಾರದ ಕಾರ್ಖಾನೆಗಳಲ್ಲಿ ಬಟ್ಟಿಯಿಳಿಸಿದ ಅತ್ಯಂತ ಮನೋಹರವಾದ ಪರಿಮಳವುಳ್ಳ ಶ್ರೀಗಂಧದ ಎಣ್ಣೆಯೇ ಪ್ರಪಂಚದಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದದ್ದು. ಈ ಎಣ್ಣೆಯು ಸರ್ವ ಸಮರ್ಪಕವಾದ ಸ್ಥಳ ಸನ್ನಿವೇಶದಲ್ಲಿ ಬೆಳೆದು ಕಡಿದು ಕೂಡಿಟ್ಟ ಶ್ರೀಗಂಧದ ಮರದಿಂದ ತಯಾರಾದದ್ದು. ಅದರ ಸುವಾಸನೆಯು ಮರದಲ್ಲಿ ಸಾಕ್ಷಾತ್ತಾಗಿರುವ ಎಣ್ಣೆಯದು ಹೇಗೆಯೋ ಹಾಗೆಯೇ ತುಂಬಿಕೊಂಡು ಸ್ವಲ್ಪವೂ ಕುಂದದೆ ಇರುತ್ತದೆ. ಲೋಕದಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ಸಾಬೂನುಗಳ ಮತ್ತು ಪರಿಮಳ ದ್ರವ್ಯಗಳ ತಯಾರಿಕೆಯಲ್ಲಿ ಈ ಸುವಾಸನೆ ಉಪಯುಕ್ತವಾಗುತ್ತದೆ.



## ಮೈಸೂರು ಶ್ರೀಗಂಧದ ತೈಲ



**ಗವರ್ನಮೆಂಟ್ ಸ್ಯಾಂಡಲ್‌ಉಡ್ ಆಯಿಲ್ ಫ್ಯಾಕ್ಟರಿ,**
**ಮೈ ಸೂ ರು.**

★ ದೀಪಾವಳಿಯ ಶುಭಾಶಯಗಳು ★

ನೀವು ಮೆಚ್ಚುವ ಉತ್ತಮ ಸಾಮಾಜಿಕ ಚಿತ್ರ




**ನಿಮ್ಮ ಊರಿನ ಚಿತ್ರಮಂದಿರದಲ್ಲಿ ನೋಡಲು ಮರೆಯದಿರಿ**

ಹಂಚಿಕೆದಾರರು ;

ಮೈಸೂರು ಸಂಸ್ಥಾನಕ್ಕೆ :

**ವಿಜಯಾ ಟಾಕೀ ಡಿಸ್ಟ್ರಿಬ್ಯೂಟರ್ಸ್,**

**ಬೆಂಗಳೂರು-೯**

ಮುಂಬಯಿ ಪ್ರಾಂತ್ಯ ಮತ್ತು ಹೈದರಾಬಾದು ಸಂಸ್ಥಾನಕ್ಕೆ :

**ಶ್ರೀನಿವಾಸ ಪಿಕ್ಚರ್ಸ್, ಗದಗ.**

ಕಟಕ




ಸಂಪುಟ ೧೬ ನವೆಂಬರ್ ೧೯೫೬ ಸಂಚಿಕೆ ೮

ಕನ್ನಡಿಗರ ಒಕ್ಕೂಟ ರಾಜ್ಯಸ್ಥಾಪನೆಯು, ದೀಪಾವಳಿಯ ಶುಭ ದಿವಸದಂದು ನಡೆಯುವುದು, ಮುಂಬರುವ ದೇದೀಪ್ಯಮಾನವಾದ ಭವಿಷ್ಯಕ್ಕೆ ಸಂಕೇತವೆನ್ನಬಹುದು.

ಇಂತಹ ನಾಡನುಡಿಗಳ ಹಬ್ಬದ ದಿನದಂದು ಭಗವಂತನನ್ನು "ನಮ್ಮನ್ನು ರಾಷ್ಟ್ರ ಹಿತದ ಹಾದಿಯಲ್ಲಿ ನಡೆಸಿ ಕೊಡಯ್ಯಾ" ಎಂದು ತಲೆ ಮಣಿದು ಬೇಡುತ್ತೇವೆ.

ಈ ಹಬ್ಬವು ಸಾಧ್ಯವಾಗುವಂತೆ ಕಾಯಾ ವಾಚಾ ಮನಸಾ ದುಡಿದ, ದುಡಿದು ಮಡಿದ, ಸೋದರ, ಸೋದರಿಯರನ್ನು, ಮೊದಲು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಅದೇ ರೀತಿ ದುಡಿದು, ಇನ್ನು ಮುಂದೆಯೂ ಸುಗಮ ಮಾರ್ಗದಲ್ಲಿ ನಡೆಸುತ್ತೇವೆಂದು ಪ್ರತಿಜ್ಞೆ ಮಾಡಿರುವ ನಮ್ಮ ಜನ ನಾಯಕರನ್ನು ಅಭಿವಂದಿಸುತ್ತೇವೆ

ಕನ್ನಡಾಂಬೆಗೆ ಈಗ ಐದು ಸೊಸೆಯರು, ವಿವಿಧ ನಡೆವಳಿಯುಳ್ಳ ಪ್ರದೇಶಗಳಿಂದ, ಬಂದಿದ್ದಾರೆ. ದ್ವಾಪರದಲ್ಲಿ ದ್ರುಪದರಾಯನಿಗೆ ಒಂದೇ ಮಗಳಿದ್ದರೂ ಐದು ವಿವಿಧ ಚೂಟಿಯ ಅಳಿಯಂದಿರು ಬಂದಿದ್ದರಲ್ಲವೇ? ಕಲಿಯುಗದಲ್ಲಿ ಅದು ಏರುಪೇರಾಗಿ ಐದು ಸೊಸೆಯರು ನೆರೆದು ಬಂದಿರುವುದು ಸಹಜವಲ್ಲವೇ?

ದಯಾಮಯನಾದ ದಾರ್ಶನಿಕ ದೇವನು ಈ ಸಂಸಾರವನ್ನು ಸುಖಮಯ ಮಾಡಲೆಂದೂ, ಈ ನಾಡನ್ನು ಹಿತಮಯ ಮಾಡಲೆಂದೂ, ತಿಳಿಯೆದೆಯಿಂದ ಪ್ರಾರ್ಥಿಸುತ್ತೇವೆ.

ಮಾತಾಪು ಉರಿದ ನಂತರ ಕಗ್ಗತ್ತಲೆ ಅರೆಕ್ಷಣ ಕಾಣಬಹುದಲ್ಲವೇ? ಅಂತೆಹ ಅಂಧಕಾಸುರನ ಹಾವಳಿಯ ನಿಮಿಷಗಳಲ್ಲಿ, ಕಚುಕುಳಿಯಿಟ್ಟು, ಜನತೆಯನ್ನು ನಕ್ಕು ನಗಿಸಿ ಬೆಳಕು ಕಾಣುವಂತೆ ಮಾಡಲು ನಾವು ದೈನ್ಯದಿಂದಲೂ ಹಾಗೂ ಧೃಡತೆಯಿಂದಲೂ ಈ ಸುದಿನ ಪ್ರತಿಜ್ಞೆಯನ್ನು ಮಾಡುತ್ತೇವೆ.

ಸಮಸ್ತ ನಗು ಮಂಗಳವು ಸಕಲರಿಗೂ ದೊರೆಯಲಿ!

---

# ಕುಹಕಿಡಿಗಳು

ಕನ್ನಡ ಮುದು ಸಂತಾನ ಶ್ರೀಯು ಚಿರವಾಗಿ ಹೊರವಾಗಲಿ!

*    *    *

ಕೀರ್ತಿಶೇಷ ಕೈಲಾಸಂರವರು, ಇಂದು ಅವರಿರುವೆಡೆಯಲ್ಲಿ, "ಏಕೀಕರಣವಾಯ್ತು, ಏಕೀಭಾವನೆಯೂ ಹಾಗೇ ಬೇಗ ಉದಯವಾಗಲಿ" ಎಂದು ಹರಸುತ್ತಿರುವರಂತೆ.

*    *    *

ಭಾರತದ ಮಿತ್ರ, ಸ್ವಾತಂತ್ರ್ಯದ ಕಹಳೆಗಾರ, ಅರ್ಲ್ ಆಟ್ಲೆಯು, "ಭಾರತದ ಪ್ರಗತಿಯನ್ನು ಕಂಡು ಷಹಭಾಷ್ ಎಂದರಂತೆ.

—ಅರಿತ ಭಾರತೀಯರೂ "ಷಹಭಾಷ್" ಎನ್ನುವಂತಾಗಲಿ!

*    *    *

ಅಮೇರಿಕಾದ ಅಧ್ಯಕ್ಷ ಚುನಾವಣೆಯ ಬಿರಸು, ರಷ್ಯಾದಲ್ಲಿ ಮಿತಿಮೀರಿದೆ ಎಂದು ಹೇಳುವುದರಲ್ಲಿ ಅರ್ಥವಿರಬಹುದು!—ಹೌದಾ! ತಮ್ಮಾ!

*    *    *

ಚೆಂದುಟಿಯ ಸವಿ ತುತ್ತನ್ನು, ಗಾಳಿಗೆ ತೂರಿ ಬಿಡುವವರು, ಜಾಣರು!

—ಹೆಂಡತಿಯು ತೌರಿಗೆ ಹೊರಟ ರೈಲು ಹೊರಟು ಹೋಯಿತು ಎಂದು ಧೈರ್ಯವಾಗಿ ಹಾಗೆ ಮಾಡುತ್ತಾರೆ! ಅವರು!

*    *    *

ಹಂಗೆರಿಗೆ ಬನ್ನಿ, ಪೋಲೆಂಡಿಗೆ ಬನ್ನಿ, ಟೈಟೊವಿನೊಡನೆ ಬನ್ನಿ ಎಂದು ನೆಹ್ರೂಜೀಯವರಿಗೆ ಆಹ್ವಾನಗಳು ಬಂದಿವೆಯಂತೆ. (ಪತ್ರಿಕೆಯ ಸುದ್ದಿ)

—ಪ್ರಧಾನಾಮಾತ್ಯ ಪದವಿಯಿಂದ ನಾನು ವಿಶ್ರಾಂತಿಯನ್ನು ಬಯಸುತ್ತಿದ್ದೇನೆ ಎಂದು ಪಂ॥ನೆಹ್ರೂರವರಂದರು (ಅದೇ ಪತ್ರಿಕೆಯ ಅದೇ ಹಾಳೆಯ ಸುದ್ದಿ)

—ಹೀಗಾದರೆ ಭಗವಂತನೇ ಗತಿ!

*    *    *

" ಚುನಾವಣೆಯ ಫಲಿತಾಂಶಗಳನ್ನು ಮರೆಯಲೇ ಬೇಕು, ಸುಖೀರಾಜ್ಯದ, ಸಮತಾ ಸಮಾಜದ, ರಚನೆಗೆ ಪೂರ್ಣ ದುಡಿಯಬೇಕು" ಎಂದು ನೆಹ್ರೂಜಿಯವರು ಘೋಷಿಸಿದರಂತೆ

—ಖದ್ದರ ಕಾಂಗ್ರೇಸಿನ ಅನುನಾಯಿಗಳೆಲ್ಲಾ ಕಿವಿಯ ರೆಕ್ಕೆಯನ್ನು ಅಂಗೈಯಿಂದ ಮುಂದಕ್ಕೆ ನೂಕಿ "ಅ್ಞ" ಎಂದರಂತೆ.

---

# ಉರಿಗಾಳು

---

ಹೊಯ್! ಸಲ!, ಎಂದಾಗ, ಹೊಯ್ಸಳ ಸಾಮ್ರಾಜ್ಯ ಸ್ಥಾಪನೆ ಆಯಿತು.... ಹೊಯ್ಯಲಿಲ್ಲ, ಬಡಿಯಲಿಲ್ಲ, ಕರ್ಣಾಟಕ ಸ್ಥಾಪನೆ ಆಯಿತು........ಇದೀಗ ಸೋಜಿಗ!

* * *

ಒಮ್ಮತದಿಂದ ಅಯ್ಕೆಯಾಗಿದ್ದರೂ, ಸಮ್ಮತದಿಂದ ಆಯ್ಕೆಯಾಗಿದೆ, ಎಂಬ ಅರ್ಥ ಬರುವುದಿಲ್ಲವೆಂಬ ಟೀಕೆ ಎದ್ದಿದೆ....ಗಂಡ ಹೆಂಡಿರ ಜಗಳ, ಮದುವೆ ಆದ ಮೇಲೆಯೇ ಪ್ರಾರಂಭ.

* * *

ನವ ಮೈಸೂರು ಪ್ರಾಂತಕ್ಕೆ ಸಮುದ್ರ "ತೀರವೂ" ಸಿಕ್ಕಿರುವುದು ಭಾಗ್ಯೋದಯ ....ಇದು "ತೀರ" ಶ್ಲಾಘನೀಯ.

* * *

ಕರ್ಣಾಟಕದ ಬೆಟ್ಟ ಗುಡ್ಡಗಳೆಲ್ಲವೂ ನವೆಂಬರ್ ಒಂದನೆಯ ತಾರೀಖು, ಹಿಂದೆ ಇದ್ದುದಕ್ಕಿಂತ ಎತ್ತರವಾಗಿರುತ್ತದೆ, ಸಂದೇಹವಿರುವವರು ಆ ದಿನ ಅವುಗಳನ್ನು ಪರೀಕ್ಷಿಸಬಹುದು, ಎಂದು ಒಬ್ಬರು ಭೂ ಶಾಸ್ತ್ರಜ್ಞರು ನುಡಿದಿದ್ದಾರೆ.

* * *

ಹೊಸ ಮೈಸೂರು ಪ್ರಾಂತಕ್ಕೆ ಚಿನ್ನದ ಗಣಿಯ ಉಡುಗೊರೆಯನ್ನಿತ್ತವರು ನಿಜಕ್ಕೂ ಧನ್ಯರು (ಪತ್ರಿಕೆ)........ಈಗಿನ ಕಾಲದ ಸುವರ್ಣ ವೃಷ್ಟಿ ಇದು.

* * *

ಕಾವೇರಿ ನೀರಿಗೂ ನವೆಂಬರ್ ೧ ನೆ ತಾ|| ಉದಯ ಕಾಲದಲ್ಲಿ ಕಾವು ಏರಿತಂತೆ........

* * *

ಅಖಿಲ ಕರ್ನಾಟಕ ಅಸೆಂಬ್ಲಿಯಲ್ಲಿ ಉಪಯೋಗಿಸಲನುಕೂಲವಾಗುವಂತೆ, ನಾನಾಪ್ರದೇಶಗಳಿಂದ, ಕಟುಟೀಕಾ ಪದಗಳನ್ನಾರಿಸಿ ತಯಾರಿಸಲು, ಒಂದು ಖಾಸಗಿ ಸಮಿತಿಯನ್ನು ರಚಿಸಲಾಗಿದೆಯಂತೆ.

* * *

ಸರ್ಕಾರಿ ಕೆಲಸ, ದೇವರ ಕೆಲಸ,....ಆದ್ದರಿಂದ, ಸರ್ಕಾರಿ ನೌಕರರೆಲ್ಲ ದೇವ ಲೋಕದಿಂದಿಳಿದು ಬಂದವರು, ಎಂದು ಜನ ಏಕೆ ಒಪ್ಪಿಕೊಳ್ಳುವುದಿಲ್ಲ ?

* * *

ಹೊಸ ಮೈಸೂರು ಅಸೆಂಬ್ಲಿಯಲ್ಲಿ ಸದಸ್ಯರೆಲ್ಲರೂ ಅಚ್ಚ ಕನ್ನಡದಲ್ಲೇ ಮಾತನಾಡಬೇಕೆಂಬ ಪ್ರತಿಜ್ಞೆ, ಮಾಡುವರಂತೆ....ಇದರಿಂದ, ಅನೇಕರು ಬಾಯಿ ಮುಚ್ಚಿಕೂಡುವ ಸುಯೋಗ ದೊರೆಯುವುದಲ್ಲವೆ ?

* * *

ತೆಲುಗಿನಲ್ಲಿ ಜಾತೀಯ ಮನೋಭಾವ ಅಂದರೆ, ರಾಷ್ಟ್ರೀಯ ಮನೋಭಾವ, ಎಂದೇ ಅರ್ಥ!.... ಹಾಗಾದರೆ ಕನ್ನಡಿಗರೇ ಅವರಿಗದನ್ನು ಕಲಿಸಿರಬೇಕೆಂದು ಕೆಲವು ತೀವ್ರಗಾಮಿಗಳು ವಾದಿಸುತ್ತಿದ್ದಾರೆ.

* * *

ನವ ಮೈಸೂರಿನ ಉದಯೋತ್ಸವ ಸಮಾರಂಭಕ್ಕಾಗಿ ದೇಶದಾದ್ಯಂತ ಲಕ್ಷಾಂತರ ಕವಿಗಳು ಕವನಗಳನ್ನು ರಚಿಸಿದ್ದಾರೆ. ಆದರೆ, ಅವುಗಳೆಲ್ಲವನ್ನೂ ಸಭೆಗಳಲ್ಲಿ ಓದಲು ಅವಕಾಶ ದೊರೆಯುವುದೆಂತು ?, ಎಂದೊಬ್ಬರು ಸಹತಪಿಸಿದಾರೆ....ಕೂಸು ಹುಟ್ಟಿದ ಮೇಲೆ ಕುಲಾವಿ ಹಾಕಿಕೊಳ್ಳುವುದು, ಕೂಸಿನ ಖುಷಿ ! ಅದನ್ನ ಹೊಲೆದಿಡುವುದು ಮಾತ್ರ ನಮ್ಮ ಕರ್ತವ್ಯ.

* * * * * * * * * * * * * *

ಮಹಿಳೆಯರಿಗೂ, ಅಲ್ಪ ಸಂಖ್ಯಾತರಿಗೂ, ಸಚಿವ ಸಂಪುಟದಲ್ಲಿ ಅವಕಾಶ ಕೊಡಲು ಉತ್ಸಾಹಿಯಾಗಿದ್ದೇನೆ ಎಂದು ನಮ್ಮ ಮುಖ್ಯ ಸಚಿವರು ಹೇಳಿದಂದಿನ್ನಿಂದ, ಒಬ್ಬಳೇ ಹೆಂಡತಿ, ಅಲ್ಪ ಸಂಖ್ಯಾತೆ, ನನಗೇ ಅದು ಮೀಸಲು ಎಂದು ಒಂದೊಂದು ಕನ್ನಡ ಖಾದಿ ಸಂಸಾರದಲ್ಲೂ ಹೊಯ್ಲು ಎದ್ದಿತ್ತಂತೆ !

—ನರಕ ! ಚತುರ್ದಶಿಯ ಹಿಂದಿನ ಎರಡು ದಿನಗಳಲ್ಲಿ ! !

* * *

ನಾಡ ಚಿನ್ನವು ನಾಡಿನ ಏಳಿಗೆಗೆ ಇನ್ನುಮುಂದೆ ಮುಡುಪಾದಂತೆ, ನಾಡಿನವರೆಲ್ಲಾ ಚಿನ್ನಗಳಾಗಲಿ ! ಎಂದು ಹಾರೈಸುತ್ತೇವೆ.

* * *

ಒಂದಲ್ಲಾ ಮೈಯಿಸೂರಿಗೆ-ಅಂಚಿಲ್ಲಾ ಬೇನೆ.

* * *

ಸಂಜೆಯು ವೇಳೆಗೆ ಸಂಜೀವ ! ಮುಂಜಾನೆಗೆ ನಿಜಲಿಂಗ ! !

* * *

ಎಥಿಯೋಪಿಯಾ ಚಕ್ರವರ್ತಿಗಳು ತಮ್ಮೂರಿನಲ್ಲಿ ಸವಾರಿಗೈಯುವಾಗ ರಸ್ತೆಯ ಇಕ್ಕೆಡೆಗಳಲ್ಲೂ ಮನೆಯಲ್ಲಿರುವವರು ಅಲ್ಲಲ್ಲೇ ಸಾಷ್ಟಾಂಗವೆರಗುತ್ತಾರಂತೆ.

—ಇಲ್ಲಿ ಚಕ್ರವರ್ತಿಗಳು, ಪತ್ರಿಕೋದ್ಯಮಿಗಳ ಕೈ ಕುಲುಕುತ್ತಾರಂತೆ, ನಿಂತಲ್ಲೇ ! !

---

# ಕೊರವಾವಲೋಕನ

---

ಅನ್ಯಾಯ! ಅನ್ಯಾಯ ಆಗಿ ಹೋಯ್ತಪ್ಪಾ! ಎಂದು ಹೇಳುತ್ತಾ ಬಂದ ಕೊರವ, ಭಾನುವಾರ ಸಂಜೆ ಕ್ಲಬ್ಬಿಗೆ. ನಮ್ಮ ಮೇಜಿನ ಬಳಿಗೆ ಬಂದು ಒಂದು ಕುರ್ಚಿ ಎಳೆದುಕೊಂಡು ಕೂತುಕೊಂಡ ನಾವೆಲ್ಲಾ ನೋಡಿದೆವು ಚೆನ್ನಾಗಿಯೇ ಇದ್ದ. ಸೂರ್ಯ ಇನ್ನೂ ಮುಳುಗಿರಲಿಲ್ಲ. ಅಂದ ಮೇಲೆ ಅರೆ ಕತ್ತಲೇಲಿ ಆಗೋ ಅನ್ಯಾಯದ ಮಾತಲ್ಲ ಅದು.

ನನಗೆ ನಾಲಿಗೆ ತೀಟೆ ಹೆಚ್ಚಾಯ್ತು. ಕೇಳಿಯೇ ಬಿಟ್ಟೆ. ಕಪ್ಪೆ ಹಾವನ್ನು ಕೇಳುತ್ತೆ, ನೋಡಿ ನಿನಗೆ ನನ್ನ ಕಂಡರೆ ಇಷ್ಟವೇ ಅಂತ, ಆ ದನಿಯಲ್ಲಿ, ಏನ ನ್ಯಾಯವಪ್ಪಾ? ಎಂದು.

ಕೊರವ ಒಮ್ಮೆ ತುಟಿಯನ್ನು ನಾಲಿಗೆಯಿಂದ ಒದ್ದೆಮಾಡಿಕೊಂಡ. ನಂತರ ತುಟಿಯ ಮೇಲೆ ನಾಲಿಗೆಯನ್ನು ನಾಲ್ಕು ಸಲ ಮಸೆದು ಹರಿತ ಮಾಡಿಕೊಂಡ. ನಂತರ ಹಾವು ಕಪ್ಪೆಗೆ ಹೇಳುವಂತೆ ಹೇಳಿದ

"ಮಗೂ! ಸ್ವಾತಂತ್ರ್ಯ ಬಂತು. ಜೀವನ ಜೊಳ್ಳಾಯಿತು. ಅದೇ ರೀತಿ ನಾವು ಕೊಳ್ಳೋ ಸೌದೇಗೂ ಸ್ವಾತಂತ್ರ್ಯ ಬಂದ ಹಾಗಿದೆ. ಅದೂ ಜೊಳ್ಳಾಗಿದೆ ಯಲ್ಲೋ! ಏನನ್ಯಾಯವಾಯ್ತಪ್ಪಾ" ಎಂದ. ಇದು ನಮ್ಮಗಳ ತಲೆಗೆ ಇಳಿಯಲಿ ಎಂದೋ ಏನೋ ಒಂದು ಎರಡು ನಿಮಿಷ ಸುಮ್ಮಗೆ, ಗಲ್ಲ ನೀವಿಕೊಂಡ. ಕರಕರ ಶಬ್ದ ಮೃದುವಾಗಿ ಕೇಳಿಸಿತು. ಕೊರವನ ಗಲ್ಲ ಹಾಗೇನೇ ಬೆಳಗ್ಗೆ ನುಣ್ಣಗೆ ಬೋಳಿ ಸಿದರೆ, ಸಂಜೆಗೆ ಗರಗಸದಂತೆ ಗಲ್ಲದಮೇಲೆ ಗಡ್ಡ ಇಣಿಕುತ್ತೆ. ಆದರೆ ಅವನ ತಲೆಯ ಮೇಲೆ ಕೂದಲಿನ ಹುಟ್ಟೇ ಅಡಗಿ ಹೋಗಿರುತ್ತೆ. ದೇವರ ಕೂದಲ ಮಾಯೆ!

ನಾವೆಲ್ಲ ನಿಶ್ಶಬ್ಧವಾಗಿದ್ದನ್ನು ಕಂಡು, ಹುರುಪುಗೊಂಡವನಂತೆ ಮುಂದುವರಿದ "ಮಗೂ! ಈ ಮಧ್ಯಾಹ್ನ ಅಡಿಗೆಯ ಹೊತ್ತಿಗೆ ಯಥಾಪ್ರಕಾರ ಎಲೆಕ್ಟ್ರಿಸಿಟಿ ಬಂಡಾಯ್ತು ಮನೇಲಿ ಒಲೆ ಇದೆ ಸೌದೆ ಇಲ್ಲ ಎಂದು ಅಮ್ಮಾವ್ರು ಪ್ರಕಟಣೆ ಹೊರಡಿ ಸಿದರು. ಇನ್ನು ಯಾರೂ ಸೌದೆ ತರಲು ಮನೆಯಲಿಲ್ಲ ಎಂದು ವಿಶೇಷ ಪ್ರಕಟಣೆ ಮಾಡಿದರು. ತಲೆಗೆ ಟವಲು ಹೊದ್ದು ಕೊಂಡು, ಸೌದೆ ತರುವ ದಿರಸು ಹಾಕಿಕೊಂಡು ನಾನು ಸೌದೆ ಅಂಗಡಿಗೆ ಹೋದೆ. ಒಂದು ರೂಪಾಯಿನ ಸೌದೆ ತೂಗಿಸಿ ಕಟ್ಟಿಸಿದೆ. ಹತ್ತಿರಿದ್ದ ಕೂಲಿಯವನನ್ನೂ ಗೊತ್ತು ಮಾಡಿದೆ. ಅವ "ತಲೆಯ ಮೇಲೆ ಏರಿಸಿ

ಸಾರ್" ಎಂದ. ಅವನೂ ಬಗ್ಗಿ ಕೈ ಕೊಟ್ಟ ಸೌದೆ ಕಟ್ಟಿನ ಕೆಳಕ್ಕೆ, ನಾನೂ ಬಗ್ಗಿ ಕೈ ಹಾಕಿದೆ. ಇಬ್ಬರೂ ಸೊಂಟ ನಿಮಿರಿಸಿದೆವು. ಹತ್ತಿಯನ್ನು ಎತ್ತಿದ ಹಾಗಿತ್ತು ಆ ಒಂದು ರೂಪಾಯಿನ ಸೌದೆ. ನಾನಂದು ಕೊಂಡೆ, ಕೂಲಿಯವನ ಕೈ ಮೇಲೇ ಭಾರ ಬಿದ್ದಿರಬೇಕು ಎಂದು. ಕೂಲಿಯುವ ಶಹಣೆ ಎಂದು. ಅವನ ತಲೆಯ ಮೇಲೆ ಸೌದೆ ಕಟ್ಟು ಕೂತಿದೆ ಎಂದು ಕೈ ಬಿಟ್ಟೆ. ಅವನೂ ಹಾಗೆ ಕೈ ಬಿಟ್ಟ. ಸೌದೆ ಕಟು ಕೆಳಕ್ಕೆ ಬಿತ್ತು. ನನ್ನ ಬಲ ಕಾಲ ಮೇಲೇ ಬಿತ್ತು.

ಅನ್ಯಾಯ! ಅನ್ಯಾಯ! ನೋಡು! ನನ್ನ ಕಾಲಿಗೆ ಸ್ವಲ್ಪವೂ ಪೆಟ್ಟೇ ಆಗಲಿಲ್ಲ. ಎಂತಹ ಜೊಳ್ಳು ಸೌದೆ ಬಂತಪ್ಪಾ ಈ ಸ್ವಾತಂತ್ರ್ಯ ಬಂದ ಮೇಲೇ!

ಎಂದು ತ್ಸು!ತ್ಸು ತ್ಸು ಮಾಡುತ್ತಾ ಗಾಳಿಗೆ ಮುತ್ತು ಕೊಟ್ಟ.

ಈ ಕತೇನ ನನಗೇಕೋ ಹೇಳಿದೆ ಎಂದು ನಾನು ಕೇಳಿದೆ ಪೆಚ್ಚು ಪೆಚ್ಚಾಗಿ. ಆಗ ಅವ ಬ್ರಹ್ಮಾಸ್ತ್ರ ಬಿಟ್ಟ ಎಲ್ಲರೆದುರಿಗೂ—ಆ ಸೌದೆ ನಿನ್ನ ಅಂಗಡಿಯಲ್ಲಿ ಕೊಂಡೇ ಕಣೋ ಅದಕ್ಕಾಗಿ ಎಂದ.

"ಇಂಕ ಮಿಾಟ ನಾನುಂಡ ಕೂಡದು" ಎಂದ ಕೊರವ.

*　　　*　　　*

ಆಂಧ್ರ ರಾಜಕೀಯ ಟೋಪೀ ಸೋದರರಿಬ್ಬರು ನಮ್ಮ ಕ್ಲಬ್ಬಿಗೆ, ಸುಹೃದಯ ಭೇಟಿಗಾಗಿ ಬಂದಿದ್ದರು. ಅವರ ರೂಪು ಲಾವಣ್ಯ, ಮಿಾಶೆ ಮಾರ್ದವತೆ ಕಂಡೇ ಕೊರವ ಈ ರೀತಿ ಅವರ ಭಾಷೆಯಲ್ಲಿ ಅವರಿಗೆ ಸುಸ್ವಾಗತ ಕೋರಿದ. ಅವರು ವಿನಯವಂತರು ಆಗಂತುಕರು. ಸುಮ್ಮನಿದ್ದರು. ಕಾರಣ ಅರವಾವೊದ್ದು ಕೇಳಿಯೇ ಬಿಟ್ಟ "ಅಲ್ಲ! ಕೊರವಾ ನೀನೇಕೆ ಇನ್ನು ಮೇಲೆ ಉಂಡ ಕೂಡದು" ಎಂದು. ಅರವಾ ಮೊದ್ದು ಮಾತನಾಡಿದರೆ ಅಲ್ಲಾನ ಹೆಸರು ಹೇಳದೇ ಆರಂಭವನ್ನೇ ಮಾಡುವುದಿಲ್ಲ. ಬಲು ಮೈತ್ರಿ ಅವರವರಿಗೆ.

ಕೊರವ ಆಗ ವಿಶದೀಕರಿಸಿದ. ಆಂಧ್ರ ಸೋದರರಿಗೆ ಅರ್ಥವಾಗುವಂತೆ. "ಇದು ಹೀಗಂಡೀ! ಮೈಸೂರಿನಲ್ಲಿ ವಿದ್ಯಾದಾನಂ ಚೇವಲ ಎಂದು ಚಳುವಳಿ ಆರಂಭವಾಗಿಂದಿ. ದಾನಿ ಕಾರಣ ನಾನೂ ಮಾ ನೆಹ್ರೂ ಸ್ಕೂಲಿಲೋ ಪಾಠ ಹೇಳಿ ಕೊಡ್ತೀನಂಡಿ. ನೆಹ್ರೂ ಸ್ಕೂಲಿಲೋ ವಯಸ್ಸಾದವವರೆಲ್ಲರೂ ಬರ್ತಾರಂಡೀ! ನಾನು ಹಾಸ್ಯ ಸಾಹಿತ್ಯ ಪಾಠ ಹೇಳೇದಂಡಿ. ದಾನಿ ಕಾರಣ ಅಜ್ಜ ತಂದೆ ಮಗ ಮುಗ್ಗರೂ ಬರ್ತಾರಂಡೀ. ಈ ದಿನ ನೋಡಂಡೀ ಒಗ ಒಳ್ಳೇ ಹಾಸ್ಯ ಕತೆ ಹೇಳಿ ನಾನಂಡೀ. ಎಲ್ಲರೂ ನಕ್ಕಿನಾರಂಡಿ ಆಗ ಅಜ್ಜ ಹೇಳಿದನಂಡೀ! ಎಷ್ಟು ಚನ್ನಾಗಿ ನಮ್ಮ ವಯಸ್ಸಿಗೆ ಅರ್ಥವಾಗೂವಂತೆ. ನೀತಿಯ ಹಾಸ್ಯದ ಕತೆ ಹೇಳಿದೀರಂಡೀ ಎಂದು

ಆಗ ತಂದೆ ಕೂಡ ಅದೇ ಮಾತು ಹೇಳಿದನಂಡೀ

ಕೊನೆಗೆ ಆ ಮಗ ಕೂಡ ಹಾಗೇ ಅಂದು ಬಿಟ್ಟನಂಡೀ!

ಇದೇನು ಟೀಕೆಯಂಡೀ! ಅರ್ಥ ಗರ್ಭಿತ ನೀತಿಯ ಕತೆ ಹೇಳಿದ್ದೀನೆ ಎಂದು ಕೊಂಡಿದ್ದರೆ, ಆಮರಿ ಪಿಲ್ಲು ೬ ವಯಸ್ಸಿನಮಗ ಚೆನ್ನ ಅಂದರೆ ನಾನೇನು ಮಾಡ ಲಂಡೀ.

ಇಂಕ ನಾನುಂಡ ಕೂಡದಂಡೀ ಎಂದ.

"ಔನಂಡೀ ಖರೀವಂಡೀ! ಶಲವಂಡೀ" ಎಂಗು ಆ ಆಂಧ್ರ ಸೋದರರು, ತಮ ಭಾಷೆಯ ಕೊಲೆಯನ್ನು ನೋಡಲಾರದೇ ಎದ್ದು ಹೊರಟೇ ಬಿಟ್ಟರು.

"ಇಂಕನಾನಿರೆಬಹುದಂಡೀ" ಎಂದು ಕೊರವ "ಬೇರರ್" ಎಂದು ಹೂಂಕ್ರ ಘರ್ಜಿಸಿದ. ಬೇರರ್ ಎರಡು ಗ್ಲಾಸ್ ಸಂಧ್ಯಾ ಪಾನೀಯ ತಂದಿಟ್ಟ, ನಾವಿಬ್ಬರೂ ಕಣ್ಣು ಮುಚ್ಚಿ ಬಾಯಾರಿಕೆ ಪರಿಹರಿಸಿಕೊಂಡೆವು.

—ಆದರೂ ನನಗನ್ನಿಸಿತು, ಏನು ಜಾಣ! ಕೊರವ! ಬಂದ ಅಭ್ಯಾಗತರನ್ನು ಎಷ್ಟು ಚೆಂದಾಗಿ ಸಾಗಿಸಿ ನಮ್ಮ ಸುಖಮಯ ಸಂಜೆಗೆ ಹಾದಿ ಮಾಡಿ ಕೊಟ್ಟ ಎಂದು.

* * *

"ವಕ್ರ ವಕ್ರವಾಗಿತ್ತು ಆ ಹೇರ್ ಪಿನ್! ಅದರ ಒಡಲೆಲ್ಲಾ ಅಲೆಯಲೆ ಯಾಗಿತ್ತು ಅದು ಎರಡೇ ಕಾಲ ಮೇಲೆ, ಮುಳ್ಳಿನ ಮೇಲೆ ನಿಂತಂತೆ ನಿಂತಿತ್ತು. ತಲೆ ಯ ಹತ್ತಿರ ಗುಂಡಾಗಿ ಗುಂಗುರಾಗಿ ತರುಚಾಗಿತ್ತು ಆ ಹೇರ್ ಪಿನ್!" ಎಂದು ಹೇಳಿದ ಕೊರವ, ಗುರುವಾರ ದಿವಾಳಿ ಸಂಜೆ ಕ್ಲಬ್ಬಿನಲ್ಲಿ ಜೇಬಿನಿಂದ ಒಂದು ಹೇರ್ ಪಿನ್ ತೆಗೆದು, ಅದನ್ನು ತಡವರಿಸುತ್ತಾ, ಅನನ್ಯಮನಸ್ಕನಾದವನಂತೆ.

"ಓಹೋ! ಕೊರವನ ಮನೆಯಲ್ಲಿ ಇವತ್ತು ಅಳಿಯ ಬಂದಿದ್ದೇ ಇರಬೇಕು. ಆನೆ ಪಟಾಕಿ ಹೊಡೆದು ಮಕ್ಕಳು ಅವನನ್ನು ಬೆಳಗಿನ ಜಾವ ನಾಲ್ಕು ಗಂಟೆಗೆ ಎಬ್ಬಿಸಿಯೇ ಇರಬೇಕು. ಅಭ್ಯಂಜನ ಮಾಡಿದಾಗ ಕೊರವನ ಕಣ್ಣಿಗೆ ಸೀಗೆಪುಡಿ ಬಿದ್ದೇ ಇರಬೇಕು. ಬೆಳಗಿನ ತಿಂಡಿಗೆ ಖೋತಾ ಆಗಿರಲೇ ಬೇಕು. ಹಬ್ಬದ ಸಂಸಾರದ ಊಟದಲ್ಲಿ ಅಳಿಯ ಮಗಳು, ಮಗ ಸೊಸೆ, ಮಿಕ್ಕ ಚಿಲ್ಲರೆ ಪಿಲ್ಲು, ದೇವತೆಗಳ ಜತೆ ಊಟಕ್ಕೆ ವರ್ಷಕ್ಕೆರಡು ಬಾರಿ ಕೂತಾಗ, ಇವನ ಸಾರನ್ನದಲ್ಲಿ ಎಲೆಯಂಚಿನ ಉಪ್ಪು ಸೇರಿಕೊಂಡಿರಲೇ ಬೇಕು, ಏಕೆಂದರೆ ಇವನ ಎಲೆಯಲ್ಲಿ ಉಪ್ಪು ಎಡ ತಳ ಭಾಗದಲ್ಲೇ ಅವಸರದಲ್ಲಿ ಬಡಿಸಿದ್ದಿರಲೇ ಬೇಕು, ಮಜ್ಜಿಗೆ ಹುಳಿಯಲ್ಲಿ ಇವನಿಗೆ ಕಲ್ಲು ಸಿಕ್ಕಿರಲೇ ಬೇಕು, ಹಬ್ಬದ ಒಬ್ಬಟ್ಟಿನಲ್ಲಿ, ಇವನಿಗೆ ಮಾತ್ರ, ಕರಟದ ಚೂರು ಮುಪ್ಪಿನ ಹಲ್ಲಿಗೆ ತ್ರಾಸು ಮಾಡಿರಲೇ ಬೇಕು, ಇವನು ತಿಂದ ಆಂಬೋಡೆಯಲ್ಲಿ ಇಂಗಿನ ಹರಳು ಎಲ್ಲೋ ಸಿಕ್ಕಿರಲೇಬೇಕು, ಕಡೆಗೆ ಮೊಸರನ್ನ ಕಲಸಿಕೊಂಡಾಗ ಕೂದಲು ಇವನಿಗೆ

ಸಿಕ್ಕಿರಲೇ ಬೇಕು, ಆದ ಕಾರಣವೇ ಈ ಕೊರವ ಈ ವರ್ಷಾವಧಿ ಹಬ್ಬದ ಸಂಜೆ, ಈ ಹೇರ್ ಪಿನ್ ಹಿಡಿದು ಕೊಂಡು ಈ ರೀತಿ ನವ್ಯ ಗದ್ಯ ಕಾವ್ಯವನ್ನು ಬಾಯಾಡಿ ಸುತ್ತಿದ್ದಾನೆ"

ಎಂದು ನಮಗೆಲ್ಲಾ ಚೆನ್ನಾಗಿಯೂ ತಿಳಿಯಿತು. ಆದರೂ ದೀಪಾವಳಿ! ವರ್ಷ ಬೆಳಗುವ ಹಬ್ಬ! ಇವನೇಕೆ ಹೀಗೆ ಅಂಥಮಯನಾಗಿರಬೇಕು ಎಂದು ನಮಗೆಲ್ಲಾ ಒಂದು ರೀತಿಯ ಕನಿಕರ ತೋರಿತು,

ಸಹಾನುಭೂತಿ ತೋರಿಸಲು, ನಾನು "ಯಾಕೋ ಕೊರವ ಎರಡು ಕಾಲಿನ ಮುಳ್ಳನ್ನು ಹಿಡಿದುಕೊಂಡು ನವ್ಯ ಕಾವ್ಯ ಹೇಳುತ್ತಿದ್ದೀಯಲೋ ಏನೋ ರೋಗ, ಹೊಟ್ಟೆ ತುಂಬಿಲ್ಲವೇನೋ ಈ ಹಬ್ಬದ ದಿನ" ಎಂದೆ.

ಆಗ ಕೊರವ ಹೇಳಿದ. "ಇಂದು ಒಂದು ಪೌಂಡು ಬ್ರೆಡ್ಡು ತಿಂದಿದ್ದೇನೆ ಒಂದು ಸೇರು ಥೈಂಡೀ ಮೊಸರು ಉಂಡಿದ್ದೇನೆ. ನನ್ನ ಹೊಟ್ಟೆ ತುಂಬ ಹುಳು ಸೇರಿ ಕೊಂಡಿದೆ. ನಾನು ತಿಂದದ್ದೆಲ್ಲಾ ಅವುಗಳ ಪಾಡೇ, ಅಂದ ಮೇಲೆ ಹಬ್ಬದ ದಿನ ಅವುಗಳಿಗೆ ಇದನ್ನೇ ಉಣ್ಣಿಸಿದೆ. ಹೇಗೂ ನಮ್ಮಾಕೆ ಮುದ್ದಿನ ತಮ್ಮನ ಅದ್ಧೂರಿ ದೀಪಾವಳಿಗೆ ಮಕ್ಕಳೊಂದಿಗೆ ಹೋಗಿದ್ದಾಳೆ. ಎಲ್ಲರೂ ಅವರವರಿಗೆ ಖುಷಿಯಾಗು ವಂತಿದ್ದರೆ ನಮಗೂ ಖುಷಿ, ನಮಗೂ ಹಬ್ಬ ಅಲ್ಲವೇ? ಎಲ್ಲರಿಗೂ ಹಬ್ಬ, ನನಗೂ ಹಬ್ಬ, ನನ್ನ ಹೊಟ್ಟೆಯ ಹುಳುಗಳಿಗೂ ಹಬ್ಬ! ಹಬ್ಬದ ಮಧ್ಯಾಹ್ನ ಸ್ವಲ್ಪ ನಿದ್ರೆ ಬರಬಹುದೇನೋ ಎಂದು ಮನೆಗೆ ಬೀಗ ಹಾಕಿಕೊಂಡು ವಾಕಿಂಗ್ ಹೊರಟೆ ದಾರಿ ಯಲ್ಲಿ ಈ ಹೇರ್‌ಪಿನ್ ಕಾಲಿಗೆ ಚುಚ್ಚಿತು. ಯಾರದೋ ಏನೋ! ಅದನ್ನು ತೆಗೆದು ಕೊಂಡೆ. ಬಡವನನ್ನು ಕಂಡರೆ ನೆಲವೇ ಮುನಿಯುತ್ತೆ, ನತದೃಷ್ಟನನ್ನು ಕಂಡರೆ ಹೇರ್‌ಪಿನ್ನೇ ಚುಚ್ಚುತ್ತೆ!

ಕುಂಟುತ್ತಾ ಮನೆಗೆ ಹಿಂತಿರುಗಿ ಬಂದು ಮಲಗಿದೆ. ಲಕ್ಷಣವಾಗಿ ನಿದ್ರೆ ಬಂತು. ಸಂಜೆ ೫ ಕ್ಕೆ ಎದ್ದೆ. ಹೊಸ ಹುರುಪು ಬಂದಿತ್ತು. ಕಣ್ಣು ಸ್ವಚ್ಛವಾಗಿತ್ತು. ಕ್ಲಬ್ಬಿಗೆ ಬಂದೆ. ಅಷ್ಟೇ ಕಣ್ರೋ ಎಂದ.

ಆ ಹೇರ್‌ಪಿನ್ ನೋಡಿದಾಗ ನಮ್ಮೆಲ್ಲರ ಮನಸ್ಸಿನಲ್ಲೂ ಒಂದೇ ಯೋಚನೆ. ಇದು ಯಾರ ಮನೆಯವರದಿರಬಹುದು? ಎಂದು. ಕಾರಣ ಕೊಂಕು ಹುಬ್ಬಿನಿಂದ ಬೇಗ ನಂನಮ್ಮ ಮನೆಗೆ ಹೊರಟೆವು.

* * *

—o—

# ನವ ಕಾಳಿದಾಸ

ದುರ್ಮುಖಿ! ದುರ್ಗಾಷ್ಟಮಿ! ಕಾಳಿ ದೇವಾಲಯದಲ್ಲಿ ಸಂಧ್ಯಾ ಮಂಗಳಾರತಿಗೆ ಜನ ಸಮೂಹದ ಮಧ್ಯೆ ನಿಂತಿದ್ದೇನೆ. ದೇವಿಗೆ ನೈವೇಧ್ಯ ಮುಗಿದಿದೆ. ಭಕ್ತರೆಲ್ಲಾ ಶಕ್ತಿ ಶತಕವನ್ನು ಒಕ್ಕೊರಲಿನಿಂದ ಗಟ್ಟಿಯಾಗಿ ಪಠಿಸುತ್ತಿದ್ದಾರೆ. ಉಸಿರು ಬಿಡಲುಕೂಡ ಗಾಳಿಯಿಲ್ಲದಷ್ಟು ಜನ ಜಂಗುಳಿ. ಕತ್ತಲೆಯು ಚೆನ್ನಾಗಿ ಅರಿವಾಗಲೆಂಬಂತೆ ಎರಡು ಹಣತೆ ದೀಪ ಮಿಣುಕು ಮಿಣುಕಾಗಿ ಉರಿಯುತ್ತಿದೆ ದೇವಿಯಾಲಯದಲ್ಲಿ. ಶತಕ ವನ್ನು ನಾನೂ ಗಟ್ಟಿಯಾಗಿ ಹೇಳಲಾರಂಭಿಸಿದೆ. ಅದೊಂದೇ ಮಾರ್ಗ ಉಸಿರಾಡಲು. ವಾತಾವರಣ ಒಂದು ರೀತಿಯಾಗಿ ದೈವ ಭಕ್ತಿಯನ್ನುಂಟು ಮಾಡಿತು. ಕ್ರಮೇಣ ಕಾಳಿದಾಸನ ಜ್ಞಾಪಕ ಬಂತು. ಭ್ರೋಳಿ ಬಂತು ಪಕ್ಕದ ಕಂಭಕ್ಕೊರಗಿ ನಿಂತಲ್ಲೇ ಮೈ ಮರೆತೆ.

*       *       *

ಬಾಯಿಂದ ಹೊರಗೆ ಕೆನ್ನಾಲಿಗೆಯನ್ನು ಚಾಚಿದ ದೇವಿ ಪ್ರತ್ಯಕ್ಷಳಾದಳು ಡಾಕ್ಟರು ರೋಗಿಯನ್ನು ಬಾಯಿ ತೆರಿ ಎಂದು ಹೇಳುವಾಗ ತಾನೂ ಹೇಗೆ ಬಾಯಿ ತೆರೆಯುವುದು ಸ್ವಾಭಾವಿಕವೋ ಅದೇ ರೀತಿ ನಾನೂ ದೇವಿಯು ಪ್ರತ್ಯಕ್ಷಳಾದಾಗ ನನ್ನ ನಾಲಿಗೆಯನ್ನೂ ಹೊರಕ್ಕೆ ಚಾಚಿದೆ. ದೇವಿಯ ಹದಿನಾರು ಕೈಗಳಲ್ಲಿ ಒಂದು ಹಾರೆಯನ್ನು ಹೊತ್ತಿತ್ತು. ಆ ಹಾರೆಯ ತುದಿಯಿಂದಲೇ ನನ್ನ ಚಾಚಿದ ಹೊರ ಬಿದ್ದಿದ್ದ ಒಣ ನಾಲಿಗೆಯ ಮೇಲೆ ದೇವಿಯು ಬೀಜಾಕ್ಷರವನ್ನೂ ಗೀಚಿದಳು. ಧನ್ಯನಾದೆ ಎಂದು ಕೊಂಡೆ.

*       *       *

ಎಚ್ಚೆತ್ತೆ. ಎಚ್ಚೆತ್ತಾಗ ದೇವೀಸ್ಥಾನದ ಹೊರಗಿದ್ದ ಗರುಡಗಂಭದ ಪಕ್ಕದಲ್ಲಿ ಬಿದ್ದಿದ್ದೆ ಯಾರೋ ಅಲ್ಲಿ ಸಾಗಿಸಿದ್ದರು ನನ್ನನು. ಎದ್ದು ಕುಳಿತೆ. ತಂಗಾಳಿ ಸುಮಾರಾಗಿ ತಲೆಯ ಮೇಲೆ ತಂಪಗೆ ಬೀಸುತ್ತಿತ್ತು. ಹಾಗೂ ದೇವಿಯು ಅಂದು ಕುರುಬನನ್ನು ಇದೇ ರೀತಿ ಕಾಳಿದಾಸನನ್ನಾಗಿ ಮಾರ್ಪಡಿಸಿದ್ದು ಜ್ಞಾಪಕಕ್ಕೆ ಬಂತು. ಎಲ! ಎಲಾ!! ನನಗೂ ಹೀಗೆ ಆಯಿತಲ್ಲವೆ? ಇಂದು! ಎಂದೂ ಅನ್ನಿಸಿತು. ಅಂದು ಆ ಕಾಳಿದಾಸ "ಜೈ! ಜಗಜ್ಜನನಿ! ಸುಧಾ ಸಮುದ್ರಾಂತ ರುದ್ರನ್ಮಣಿ ದ್ವೀಪ್ಯ ಸಂಭೂತ ಸಂಭಾವಿತೇ" ಇತ್ಯಾದಿ ಬರೆಯಲಿಲ್ಲವೇ ? ಬರೆದು ಅಮರ ಕವಿ ಯಾಗಲಿಲ್ಲವೇ ? ಎಂದು ನೆನಪಾಯ್ತು.

ಕೂಡಲೇ ಪಕ್ಕದಲ್ಲಿ ಅನುಕೂಲವಾಗಿ ಸಿಕ್ಕಿದ ಔಷಧಿಯ ಜಾಹೀರಾತಿನ ಹಿಂಬದಿಯ ಖಾಲಿ ಹಾಳೆಯಲ್ಲಿ, ಗರುಡ ಗಂಬದ ಬಳಿ ಸುರಿದಿದ್ದ ದೇವಿಯನ್ನೈವೇದ್ಯದ ಕೆಂಪು ದ್ರಾವಕದಲ್ಲಿ, ಹುಲುಸಾಗಿ ಜೋಷಾಗಿ ಬೆಳೆದಿದ್ದ ನನ್ನ ಉಗುರಿನಿಂದಲೇ, ಸ್ಫೂರ್ತಿ ಕಾವ್ಯವನ್ನೂ ಬರೆದೇ ಬಿಟ್ಟೆ! ಅಖಂಡ ಕರ್ಣಾಟಸೂರಿನ, ಅಥವಾ ಮೈಸೂ ರ್ಣಾಟಕದ ಭಾಷೆಯಲ್ಲೇ ಬರೆದೆ.

"ಸೋದರ, ತಂಗಿಯರೇ, ಇಂದು ನಾವು ಪರ್ವಕಾಲದಲ್ಲಿದ್ದೇವೆ. ರಾಜ್ಯದ ಪುನರ್ವಿಂಗಡಣೆಯಾಗಿ, ಅಣ್ಣ, ಸೋದರಿಯರೆಲ್ಲರೂ ಈಗ ಪುನರ್ಮಿಲನವಾಗಿ, ಹರುಷದಿಂದ ಹುರುಪಿನಿಂದ, ಭಾರತಾಂಬೆಯನ್ನು ಭೂಲೋಕದ ಮಂದಾಸನದಲ್ಲಿ ಪ್ರತಿಷ್ಠೆ ಮಾಡಲೆತ್ನಿಸುತ್ತಿದ್ದೇವೆ ಈ ಪ್ರಯತ್ನಕ್ಕೆ ಭಾರತಾಂಬೆಯ ಆಶೀರ್ವಾದದ ಕವಚವಿದೆ. ಪೌರೋಹಿತ್ಯಕ್ಕೆ, ಶಾಂತಿದೂತ ಪಂಡಿತಜೀಯವರು ಸಂಕಲ್ಪ ಮಾಡಿ ದ್ದಾರೆ. ಪಂತರು ಒಳ ಆಡಳಿತವನ್ನೂ ಸಲಕರಣೆಗಳನ್ನೂ ಸನ್ನಾಹಿಸಲು ಕಂಕಣ ಕಟ್ಟಿಕೊಂಡಿದ್ದಾರೆ ಅಂದ ಮೇಲೆ ನಮ್ಮ ಸಂಕಲ್ಪ ಸಿದ್ಧಿಯಾಗುವುದರಲ್ಲಿ ಸಂದೇಹ ವೇ ಇಲ್ಲ. ನಮ್ಮ ಈ ಹುರುಪಿನಲ್ಲಿ, ಈ ಹುಮ್ಮಸ್ಸಿನಲ್ಲಿ, ಈ ಅಮೋಘ ಅಮಲಿನಲ್ಲಿ ಸಂದೇಹ ತೋರಿ ಬರುವುದಿಲ್ಲ, ಬರುವಂತೆಯೂ ಇಲ್ಲ. ಸಹಜವಾಗಿ ಬಂದರೂ ತುಳಿದೇ ಬಿಡುತ್ತೇವೆ. ಆನೆಯು ಸೊಳ್ಳೆಯನ್ನು ಪಾದದಡಿ ನುಸುಕುವಂತೆ ನುಸಿದೇ ಬಿಡುತ್ತೇವೆ.

ಇಂದು ದೀಪಾವಳಿ! ನಮ್ಮ ಅಖಂಡ ಸರ್ಕಾರವು ದಿವಾಳಿ ಆಚರಿಸಿದರೂ ನಾವು ಅಂಧಕಾರವನ್ನೇ, ಈಗ ಎಲ್ಲೆಲ್ಲೂ ಹಂಚುತ್ತೇವೆ. ಅಂಧಕಾಸುರನ ಹಾವಳಿ ಯನ್ನೂ ಕಡೆಗೂ ಹರಿದೇ ತುಂಡರಿಸುತ್ತೇವೆ.

ಸದ್ಯಕ್ಕೇ ನಿಮಗೆ ಉಣಲು ಬೇಕೇ ಬೇಕಾದ ಅಕ್ಕಿ ರಾಗಿ ಜೋಳವನ್ನೂ ಇಮ್ಮಡಿ ಬೆಲೆ ಏರಿಸಿದ್ದೇವೆ. ದಿಟ! ಅದು ಪ್ರಕೃತಿ ನಿಯಮ! ಶಸ್ತ್ರ ಪ್ರಯೋಗದಲ್ಲಿ ದುರಂತ ಬೇನೆಯನ್ನು ಪರಿಹರಿಸಲು ಅಂಗಾಂಗವೊಂದನ್ನು ಬಲಿ ಕೊಡುವಂತೆ ಮಾತ್ರ! ದಾಯಾದಿ ಜಗಳದಲ್ಲಿ ಕಾರಣವಾದ ಮೂಲಧನದ ಮುಕ್ಕಾಲು ಪಾಲನ್ನು ನ್ಯಾಯ ವಾದಿಗಳಿಗೆ ಬಲಿಕೊಡುವಂತೆ ಮಾತ್ರ! ಇನ್ನೂ ಮುಂದಿದೆ ನಮಗೆ ಸ್ವರ್ಗಸೀಮಾ! ತೋಳಿಗೆ ತೋಳು ಕೊಡಿ! ಭುಜಕ್ಕೆ ಭುಜ ಕೊಡಿ! ಮುನ್ನಡೆಗೆ ಮುನ್ನಜ್ಜೆಯನ್ನು ತಾಳವರಿತು ಹಾಕಿ! ರಾಗವರಿತು ನಾಟ್ಯವಾಡಿ! ನಿಮ್ಮ ಮಕ್ಕಳಿಗೆ, ಅಥವಾ ಮೊಮ್ಮಕ್ಕಳಿಗೆ, ಅಲ್ಲದಿದ್ದರೆ, ಮರಿ ಮರಿ ಮೊಮ್ಮಕ್ಕಳಿಗೆ ಇದರಿಂದ ಎಂದಾದರೂ ಸ್ವರ್ಗ ಇಲ್ಲೇ ದೊರಕಿಯೇ ದೊರಕುತ್ತದೆ. ನಂಬಿ! ನಮ್ಮನ್ನು ನಂಬದಿದ್ದರೂ, ನಮ್ಮ ರಕ್ಷಾ ಮುಖನಾದ ಮಹಾತ್ಮನನ್ನು ನಂಬಿ. ಆ ಹಿರಿಯಾತ್ಮ ತಪ್ಪು ಮಾಡಲಾರ ನಲ್ಲವೇ? ದೇವ ಸಂಭೂತನಲ್ಲವೇ ಆತ! ದೇವರು ತಪ್ಪು ಮಾಡಲು ಸಾಧ್ಯವೇ? ದೂರ ದೃಷ್ಟಿಯಿದ್ದವರಿಗೆ!" ಇದು ತಿಳಿಯುವುದಿಲ್ಲವೇ?

* * *

ಅಷ್ಟು ಹೊತ್ತಿಗೆ ದೇವೀಸ್ಥಾನದಿಂದ ಭಕ್ತಸ್ತೋತ್ರವು ಹೊರ ಬಿದ್ದಿತು. ಆ ರಭಸಕ್ಕೆ ಬೆದರಿ ಪೂರ್ಣ ಎಚ್ಚೆದ್ದ ನಾನು ಮನೆಯ ಕಡೆ ಓಡಿ ಬಿಟ್ಟೆ. ಬರೆದುದನ್ನೂ ಮರೆತೇ ಬಿಟ್ಟೆ! ಪುಣ್ಯಮತಿ ಬರಲಿಲ್ಲ. ಆ ಬರಹವನ್ನು ನಾನು ಹಿಂತಿರುಗಿ ಓಡಿದಾಗ ತರಲಿಲ್ಲ! ಕಂಡವರ ಕೈಸೇರಿತು ಆ ಲೇಖನ.

* * *

ಈಗ ಆ ಬರವಣಿಗೆಯೇ ಮುಂದಿನ ಚುನಾವಣೆಯ ಜಾಹೀರು ಪತ್ರವಾಗಿದೆ, ಆಳಧಿಕಾರದ ಪಕ್ಷದವರಿಗೆ! ಈಗೇನು ಮಾಡಲಿ!

ಆದರೆ

ಅವರು ಮರೆತಿದ್ದಾರೆ, “ಈಗ” ಸೊಳ್ಳೆ ಆನೆಯ ಕಾಲ ತೆಳಗೆ ಸಿಕ್ಕಿಲ್ಲ! ಕಿವಿಯ ಒಳಗೆ ಗುಂಯ್ ಗುಟ್ಟುತ್ತಾ, ಆನೆಯ ಪ್ರಾಣವನ್ನೇ ತಿನ್ನುತ್ತಿದ್ದೆ ಎಂಬುದನ್ನು ಆದರೆ ನನ್ನ ಸಲಹೆ ಈಗ ಕೇಳುವವರಾರು ?

—“ ಕಾಳಿ ಪ್ರಸಾದ್ ”



# ನವೆಂಬರ್ ಒಂದರ ಗಾದೆಗಳು

ಭೂಪ ಹೋದರೆ, ಭೂಪಟ ಹೋಗುತ್ತದೆಯೆ ?

ರಾಜ ರಾಜ್ಯಪಾಲನಾದರೆ, ರಾಜೇಂದ್ರರಿಗೆ ಆನಂದ

ಹಂಪೆಯಲ್ಲಿ ಮುಳಗಿದ್ದು, ಬೆಂಗಳೂರಲ್ಲೆದ್ದಿತು

ನವ ಮೈಸೂರಾದರೇನು ? ನವರಾತ್ರಿಗೇನು ಕೊರತೆ ?

ಹೊಸ ನೀರು ಬಂದು ಹಳೆಯ ನೀರನ್ನು ಕೊಚ್ಚುತ್ತೆ ! ಹಳೆಯ ನೀರು ಬಂದರೆ, ಹಳೆಯ ನೀರಿಗೇನು ನಷ್ಟ ?

ಮುಕ್ಕಾಲು ಮೂರುವೀಸೆ ಆದರೂ, ದಕ್ಕಿದ್ದೇ ಪುಣ್ಯ

ಸೆರಗು ಹೋದರೂ, ಸೀರೆ ಉಳಿಯಿತಲ್ಲಾ

"ನ"ನೂ"ಣ"ನೂ ಜಗಳ ಆಡಿ, ಮೈಸೂರೇ ಉಳಿಯಿತು

ಮನಸ್ಸಿನಲ್ಲಿ ಮುನಿಸಿದ್ದರೆ, ಕನಸು ನನಸಾಗದು

ಅಣ್ಣ ತಮ್ಮ ಎಂಬುದಕ್ಕೆ ತಬ್ಬಿಕೊಂಡದ್ದೇ ಸಾಕ್ಷಿ

ಎಲ್ಲ ಕಾಯಕಕ್ಕಿಂತ, ನಾಯಕನ ಕಾಯಕವೇ ಮೇಲು

ಗಂಡು ಕನ್ನಡ ಹೆಣ್ಣು ಕನ್ನಡ ಅಂತ ನಕ್ಕವನು ನಪುಂಸಕ

ಹಾವೇರಿಗೂ ಕಾವೇರಿಗೂ ಗಂಟು ! ಮಂಗಳೂರಿಗೂ ಬೆಂಗಳೂರಿಗೂ ನಂಟು

ವೀರನಾರಾಯಣನ ಕೂಗು ಚಲುವನಾರಾಯಣನಿಗೆ ಕೇಳಿಸಿತು.

ವಿರೂಪಾಕ್ಷನ ನಿರೂಪ ಗೋಕರ್ಣಕ್ಕೆ ಮುಟ್ಟಿತು

# ಪ್ರಾಣೇಶ ಪ್ರಸಂಗ

## ಹಳ್ಳಿಯೇ ಡಿಳ್ಳಿಯೇ?

ಪ್ರಾಚ್ಯ ಸಂಶೋಧನೆ ಅಷ್ಟೇನೂ ಫಲಕಾರಿಯಾಗಿ ಕಾಣಲಿಲ್ಲವಾದ್ದರಿಂದ ಪ್ರಾಣೇಶ ತನ್ನ ಆಸಕ್ತಿಗಳಿಗೆ ಒಂದು ಮಿತಿಯನ್ನು ಕಲ್ಪಿಸಿಕೊಳ್ಳುತ್ತಿರುವ ಹಾಗೆ ಕಾಣುತ್ತದೆ. ಸೀರಿಯಸ್ಸಾಗಿ ಮುಂದೇನು ಮಾಡಬೇಕು ಎಂದು ಯೋಚಿಸುತ್ತಿದ್ದೇನೆ ಎಂದು ಬರೆದಿದ್ದಾನೆ. ಕ್ರಾಸ್‌ವರ್ಡ್ ಪಾಪ ಬಿಟ್ಟು ಹೋದ ಜಮೀನನ್ನೇ ನೋಡಿಕೊಂಡು ಹಳ್ಳಿಯಲ್ಲಿದ್ದುಬಿಟ್ಟರೇನಾಗುತ್ತೆ ಎಂದು ಪ್ರಶ್ನೆ ಹಾಕಿದ್ದಾನೆ. ನಾನು ಕೂಡಲೆ ಬರೆದೆ—" ಆಗೋದೇನಿಲ್ಲ. ಹಾಗಿರೋ ಮಹರಾಯ ಅಂತೀನೆ. ಸದ್ಯ ನೀನಾದರೂ ಹಳ್ಳಿಯಲ್ಲಿ ಥಣ್ಣಗೆ ಬಾಳಿಕೊಂಡಿರು. ಈ ಸಿಟಿ ಜನರ ಸುಟ್ಟ ಬದುಕು ಸಾಕು. ನೋವೋಕಿಲ್ ವ್ಯವಹಾರ ಮಾಡುತ್ತಾ ಕಂಡೆಯಲ್ಲ. ಇನ್ನು ನೀನು ಕಾಲೇಜು ಓದು ಮುಂದುವರಿಸಿ ಉದ್ಧಾರವಾಗುವುದೂ ಅಷ್ಟರಲ್ಲಿಯೇ ಇದೆ. 'ಸಾಕು' ಹೇಳಿಲ್ಲವೆ; ಎಷ್ಟೋ ಜನರು ಅಲ್ಲಿಂದ ಹೊರಬಂದ ಮೇಲೆ ಬುದ್ಧಿವಂತರಾಗುತ್ತಾರೆ ಅಂತ? ನೀನೂ ಕಾಲೇಜು ಮೆಟ್ಟಲು ತುಳಿದಿದ್ದಾಗಿದೆ. ಹಾಗೆ ನೋಡಿದರೆ ನಿನಗೆ ಕಡಿಮೆಯಾದದ್ದೇನು? commonsense ಇದೆ. ಇನ್ನು genius ಅಂತಾರಲ್ಲ–ಅದಕ್ಕೆ ಬೇಕಾದ un-commonsense ಕೂಡಾ ಇದೆ. ಹಿರೇರ ಮನೆ–ಮನೆಯೇನು ಅರಮನೆ–ರಿಪೇರಿ ಮಾಡಿಸಿ, ತೋಟ ಜಮೀನು ಉಸ್ತುವಾರಿ ನೋಡಿಕೊಂಡು ಸುಖವಾಗಿದ್ದು ಬಿಡು. ಬೇಕಿದ್ದರೆ ಕಾರೂ ಇಡು. ಬೋರಾದಾಗಲೆಲ್ಲ ಬೇಕಾದರೆ ಇಲ್ಲಿಗೆ ಬಂದು ಕೊಂಚ ಕೋಲಾಹಲ ತುಂಬಿಕೊಂಡು ಹೋಗು. ನಮ್ಮನ್ನೂ ಹಳ್ಳಿಗೆ ಕರಕೊಂಡು ಹೋಗಿ ನಾಲ್ಕು ದಿನ ಹಸನ್ ಬೆಣ್ಣೆ ತುಪ್ಪ ತೋರಿಸು. (ಸ್ವಾರ್ಥವಲ್ಲ ರಾಜಾ, enlightened self interest ಅಷ್ಟೆ!). ಇನ್ನೇನು ಹೇಳಲಪ್ಪ ಹಳ್ಳಿಯಲ್ಲಿ ಪುರಸೋತ್ತು ಅಂಬೋ ಬಾಬ್ತು ಇರುತ್ತೆ ಪ್ರಶಾಂತ ವಾತಾವರಣವೂ ಇರುತ್ತೆ. ಕಾವ್ಯ ಬರೆದರೂ ಬರೆದೀಯ. ಮುಖ್ಯವಾಗಿ ಹಳ್ಳಿ ಜನಗಳು ಇಷ್ಟು ಕೆಟ್ಟಿರಲಿಕ್ಕಿಲ್ಲ"–ಎಂದು ಮುಂತಾಗಿ ಮಾರುದ್ದವಿತ್ತು ನನ್ನ ಪತ್ರ. ಅದಕ್ಕೆ ಅವನ ಉತ್ತರ ಬಂತು

'ನೀನು ಹೇಳೋದೇನೋ ಚೆನ್ನಾಗಿದೆ. ಆದರೆ ಹಳ್ಳಿಯ ಜನರು ಇಷ್ಟು ಕೆಟ್ಟಿರಲಿಕ್ಕಿಲ್ಲ' ಎಂದು ಬರದಿಯಲ್ಲ. ಕೆಡೋದೆಂದರೆ ನೀನು ಏನಂತ ತಿಳಿಕೊಂಡಿದೀಯೋ ನನಗೆ ತಿಳೀದು. ಇಲ್ಲಿನ ಪೊಲಿಟಿಕ್ಸೇ ಪೊಲಿಟಿಕ್ಸು. ತಟವಟ

ತಂಟೆ, ತಕರಾರು ಯಾವುದಕ್ಕೂ ಇಲ್ಲಿ ಕಡಮೆಯಿಲ್ಲ ಮಾತೆತ್ತಿದ್ದರೆ ಮಿನಿಸ್ಟರನ್ನ ಬಲ್ಲೆ ಅಂತಾರೆ ಮುಖಂಡರುಗಳು ಗೊತ್ತು ಅಂತಾರೆ. ಆ ಮಟ್ಟಿಗೆ ಡೆಮಾಕ್ರಸಿ ಪೂರ್ತ ಬಂದು ಬಿಟ್ಟದೆ. ಧಿಮಾಕಿನ ಮಟ್ಟಿಗೆ ಸಿಟೀನೇ ವಾಸಿ ಅನ್ನಿಸುತ್ತೆ. ಸಿಟೀಲಿ ಹುಲಿ, ಕಿರುಬ, ಕತ್ತೆ, ನರಿ ಎಲ್ಲಾ ಇವೆ. ಇಲ್ಲಿಯೂ ಬೇಕಾದ ಹಾಗಿವೆ. ಆದರೆ ಅಲ್ಲಿ ಅವುಗಳ ತಂಟೇನ ತಡಿಯೋದು ಸುಲಭ. ಆದರೆ ಇಲ್ಲಿ ಯಾಕೋ ಭಯವಾಗುತ್ತೆ. ಆದ್ದರಿಂದ ಅಲ್ಲಿಗೇ ಬಂದು ಬಿಡೋಣ ಅಂತ ಯೋಚನೆ ಮಾಡ್ತಾ ಇದೀನಿ '.

"ಸಮಾಚಾರ ಕೇಳು. ರೈತರನ್ನ ನೋಡಿಕೊಂಡು ಬರೋಣ ಅಂತ ಮೊನ್ನೆ ಮಾವನವರ ಹಳ್ಳಿಗೆ ಹೋಗಿದ್ದೆ. ನನ್ನ ಜೊತೆಗೆ ಅವಳೂ ಬಂದಿದ್ದಳು. ಹಿಂದಿನ ಬಾಕಿ ಎಲ್ಲಾ ಬಿಟ್ಟು ಬಿಟ್ಟೆವಪ್ಪ, ಮುಂದೆ ಮಾತ್ರ ಸರಿಯಾಗಿರಿ ' ಎಂದು ಬಿಟ್ಟಳು ಮಹಾರಾಣಿ ಹಾಗೆ ನನಗೆ ಕೊಂಚ ರೇಗಿತು. ಆದರೂ ' ಇಪ್ಪತ್ತಮೂರನೆಯ ವಯಸ್ಸಿನಲ್ಲಿ ಸಮತಾವಾದಿಯಲ್ಲದವನು ಥಡ್ಡ, ನಾಲ್ವತ್ತರರ ವಯಸ್ಸಿನಲ್ಲಿ ಸಮತಾ ವಾದಿಯಾಗಿರುವವನು ಥಡ್ಡ'-ಅಂತ ಯಾರೋ ಎಲ್ಲೋ ಹೇಳಿದ್ದು ಜ್ಞಾಪಕಕ್ಕೆ ಬಂತು. ಅಂದ ಮೇಲೆ ನಾನು ಸೋಷಿಯಲಿಸ್ಟಾಗಿರಬೇಕಲ್ಲವಯ್ಯ ವಯಸ್ಸಿಗನು ಸಾರವಾಗಿ ? ಆದರೆ ಸೋಷಿಯಲಿಸ್ಟಾಗಿರ್ತಾ ರೈತರಿಂದ ಬಡಿದು ವಸೂಲು ಮಾಡುವ ಹಾಗಿದೆಯೆ ? ಇನ್ನು ನಮ್ಮ ಸಮತಾವಾದಿ ಸಿಂಗಣ್ಣನ ಹಾಗೆ ಹಳ್ಳಿಗೆ ಹೋದರೆ feudalism, capitalism, ಸಿಟೀಲಿ (ಮನೆ ಹೊರಗೆ) communism ಅಂತ ಇನ್ನೊಂದೆ ಹಾವಾಗಿ ಬದುಕಬೇಕು. ಇತರರಿಗೆ ಸಮತಾವಾದ ಬೋಧಿಸಿ ತಾನು ಕ್ಯಾಪಿಟಲ್ ಸಂಗ್ರಹಿಸಿಬೇಕು. ಆದರೆ ಇದಿ ನ್ಯಾಯವಾ ರಾಮಿ ? ಇದಕ್ಕೆಲ್ಲಾ ಪರಿಹಾರ ಒಂದೆ, ಜಮೀನನ್ನೆಲ್ಲ ಆಕೆಯ ಸೋದರ ಮಾವನ ಸುಪರ್ದಿಗೆ ಒಪ್ಪಿಸಿ ಬಿಟ್ಟು ನಾವಿಬ್ಬರೂ ಅಲ್ಲಿಗೆ ಬಂದು ಬಿಡುತ್ತೇವಪ್ಪ.

"ಇನ್ನೊಂದು ಸಮಾಚಾರ. ಆಕೆಯ M. B. B. S. ಐಡಿಯ ನೆಗೆದು ಬಿತ್ತು. ಅದು ಹೇಗೆ ಗೊತ್ತೆ ? ಅವಳ ಗೆಳತಿ ಡಾಕ್ಟರಿಣಿಯಾಗೋದಕ್ಕೆ ಹೋಗಿದ್ದಳು ಅನಾಟೊಮಿ ಕ್ಲಾಸಿನಲ್ಲಿ ಫಸ್ಟ್ ಡಿಸೆಕ್ಷನ್ ಕಂಡ ಹೊತ್ತಿಗೆ ಬವಳಿ ಬಂದು ಬಿದ್ದು ಬಿಟ್ಟಳಂತೆ. ಮತ್ತೆ ಕಾಲೇಜು ಮೆಟ್ಟಲು ಹತ್ತಲಿಲ್ಲ. ಈಗ ಮನೆಗೆ ಬಂದು ಸುಖ ವಾಗಿ ಕಸೂತಿ ಹಾಕುತ್ತಿದ್ದಾಳೆ. "ಆಕೆ ಬಹಳ ವೀಕು, ನನಗೆ ಕೊಂಚ ಕೂಡ ಭಯವಿಲ್ಲ" ಅಂತ ಈಕೆ ಕೊಚ್ಚಿಕೊಂಡರೂ ಒಳಗೊಳಗೆ ಕೊಂಚ ಪುಕ ಪುಕ ಅಂತದೆ ಅಂತ ನನಗೆ ಗೊತ್ತನ್ನು. ಅಜ್ಜಿ ಅಂತೂ ನೀನು ಮೆಡಿಕಲ್ ಕಾಲೇಜು ಸೇರಿದರೆ ನಾನು ಅನ್ನ ನೀರು ಬಿಟ್ಟು ಸಾಯುತ್ತೇನೆ ಅಂತ ಹಟ ಹಿಡಿದು ಬಿಟ್ಟರು. ನನಗೇನೋ ಆಕೇನ ಡಿಸ್ಕರೇಜ್ ಮಾಡೋಕೆ ಇಷ್ಟವಿಲ್ಲ. ನಮ್ಮ ದೇಶಕ್ಕೆ ಈಗ ಎಷ್ಟು ಜನ ಡಾಕ್ಟರಿದ್ದರೂ ಸಾಲದು. ಹಾಗಂದ ಮೇಲೆ....? ಆದರೆ ಅಜ್ಜೀದು

ಒಂದು ‘theory’ ಇದೆ—ಡಾಕ್ಟರುಗಳು ಜಾಸ್ತಿಯಾದ ಹಾಗೆ ಕಾಯಿಲೆಗಳೂ ಜಾಸ್ತಿಯಾಗುತ್ತೆ ಅಂತ ಅವರ ವಾದ. ತಳವಿಲ್ಲದ theory ಅದು. ಆದರೆ ಪೂರ್ತಿ ಸುಳ್ಳಲ್ಲ ಒಕ್ಕಣ್ಣಿನ ದೃಷ್ಟಿಯಿಂದ ಸತ್ಯವೇ ಇರಬಹುದು. ಅಂತೂ ಸದ್ಯ ಆಕೆ ಡಾಕ್ಟರಿಣಿಯಾಗುವ ಯೋಚನೆ ಬಿಟ್ಟಹಾಗಿದೆ. ನಾನಂತೂ ತುಂಬ diplomatic ಆಗಿದ್ದೇನೆ. ನಾನೂ ಬೇಡ ಅಂತ ತಡೆದು ಆಕೆ ಮೆಡಿಕಲ್ ಕಾಲೇಜಿಗೆ ಹೋಗೋದು ತಪ್ಪಿದರೆ ಜೀವಮಾನವಿಡೀ ಹಂಗಿಸಿಯಾಳಂತ ಗೊತ್ತು. ಈಗ social service ಅಂತ ಹೊಸಪಲ್ಲವಿ ಶುರು ಹಚ್ಚಿ ಬಿಟ್ಟಿದಾಳೆ. ಹಾಗಂದ ರೇನು ಅಂತ ಕೇಳಿದೆ. ಲೇವಡಿ ಮಾಡ್ತೀರಿ ಅಂದಳು. ನಿಜವಾಗಿ ನನಗೆ ತಿಳೀದಪ್ಪ. social service ಅಂದರೇನು ಮೇಡವೋ ಕ್ಲರ್ಕಿಣಿಯೋ, ಟೈಪಿಸ್ಟೆಯಾಗಿಯೋ ಆಗಿರೋದು ಕೂಡ social service ಇರಬಹುದು. ಶಿಶುವಿಹಾರ, ಮಹಿಳಾಸಮಾಜ, ಪಶು ಸಂಶೋಧನೆ ಇವಿಷ್ಟೇ ಇದ್ದರೂ ಇರಬಹುದು. ಅಂತೂ ಆ ಕುರಿತು ಅಲ್ಲಿಗೆ ಬಂದಮೇಲೆ ಹೆಚ್ಚು ವಿಚಾರ ಮಾಡೋಣ". ಎಂದೆಲ್ಲ ಬಲು ದೀರ್ಘವಾಗಿ ಬರೆದಿದ್ದಾನೆ ಪ್ರಾಣೇಶ.

ಸಿಟೀಲಿ ಬೆಳೆದ ನಮಗೆ ಈ ಇಟ್ಟಿಗೆ ಗಾರೆ ಗೂಡುಗಳೇ ಸ್ವರ್ಗವೆಂದಾಯಿತು. ಸಾಲದ್ದಕ್ಕೆ ಈ ಕಲಿತ ಹುಡುಗಿಯರಿಗೋ ಸಿಟೀನೇ ಬೇಕು. ಪಾಪ ಸಮಾಜ ಸೇವೆಗೆ ಹಳ್ಳೀಲಿ ಅವಕಾಶವಿಲ್ಲ! ‘ಬನ್ನಿರಪ್ಪ ಬನ್ನಿ’ ಎಂದು ಬರೆದಿದ್ದೇನೆ ನವ ಕರ್ಣಾಟಕದ ನಿರ್ಮಾಣವಾಗ್ತಾ ಇದೆ. ಇದುವರೆಗೆ ತಮಿಳರು, ತೆಲುಗರು, ಮಲೆಯಾಳಿಗಳು ಮರಾಠಿಗಳು ನಮ್ಮ ಮುನ್ನಡೆಗೆ ಅಡ್ಡಗಾಲಿಡುತ್ತಿದ್ದಾರೆಂದು ಪೇಚಾಡಿದ್ದಾಯಿತು. ಇನ್ನು ಹಾಗಿಲ್ಲವಲ್ಲ. ನಾವೇ ಪರಸ್ಪರ ಒಬ್ಬರನ್ನೊಬ್ಬರು ಥರಾಟಿಗೆ ತೆಗೆದುಕೊಂಡರೆ ಸರಿ. ಗುಜರಾತನ್ನು ಉದ್ಧಾರ ಮಾಡುವುದಕ್ಕಾಗಿ ಅಹಮ್ಮದಾಬಾದಿನ ವಿದ್ಯಾರ್ಥಿಗಳು ವಿದ್ಯೆಯನ್ನೇ ತ್ಯಾಗಮಾಡಿ ಅಜ್ಞಾನ ದೀಕ್ಷೆ ಯನ್ನು ತೊಟ್ಟಹಾಗೆ ನಮ್ಮ ತರುಣ ತರುಣಿಯರೂ ಬಹು ವಿಧದ ತ್ಯಾಗಕ್ಕೆ ಸಿದ್ಧರಾಗ ಬೇಕಾದ ಕಾಲವಿದು. ಆದ್ದರಿಂದ ಪ್ರಾಣೇಶ ಮತ್ತು ಅವನ ಹೆಂಡತಿ, ಹಳ್ಳಿಯ ನೆಮ್ಮದಿಯ ಜೀವನವನ್ನು ತ್ಯಾಗಮಾಡಲು ನಿರ್ಧರಿಸಿದ್ದು ಸ್ತುತ್ಯವೇ ಅಲ್ಲವೆ?

—ರಾಮಿ

—o—

# ಪರಿವರ್ತನೆ

(U. R. A. ಮತ್ತು V. L. M. ಇವರಿಗೆ ಅರ್ಪಿತ)

---

## 1. ಮತಾಂತರ

ಸೆಂಟ ಮೆಂಟ್ಯಾ ಲಿಟಿಯ ಒಂಟಿಕೊಪ್ಪಲಿನಲ್ಲಿ ಬಿದ್ದಿದ್ದೆ.
ಕಟ್ಟ ಕಟ-ಕಟ ಕಟ್ಟಿ-ಹೋಯ್! ಬಾಜು ಬಾಜು
ತೂರಿಸಿಟ್ಟು ಜಟಕದಿ ನವ್ಯ ಕಾವ್ಯ ಮಾರ್ಕೆಟ್ಟಿಂಗೆ ತಂದು ಬಿಟ್ಟಿ.
ಅಯ್ಯ ಲಾರೆನ್ಸ್ ಸಿರಿಂಜ್-ಅಲ್ಲಿ
ಹರಕೋಪಾನಲ ಧೂಮ ಕೇವಲಂ-
ಹೊಗೆ ಬೆಂಕಿ ಅಯ್ಯೊ ಹಾಳಾಗ.
ಮಲಗಿದ್ದೆ ಚಿತೆಯಲ್ಲಿ ಜೀವಸಹಿತ.
ಕೇಳಿದೆನು ದನಿಯೊಂದ—
'Saul saul why persecutest thou me?'
'ಯಾರು ಪ್ರಭು, ನೀನು?'
'ನಾನು Even ಅಡಿಗ whom thou persecutest'
'Thy will be done! my lord.'
ಭಗ್ನ ಸೇತುವೆ ಮೇಲೆ ರೈಲು ಬಂದು
ಸೀಟಿ ಹಾಕಿತು ಮೂರು ಬಾರಿ ಹೊಡೆಯಿತುಪಲ್ಟಿ,
ಬಿದ್ದ ಬೈರನ್
ಬಿದ್ದ ಕೀಟ್ಸ್
ಬಿದ್ದರಾ ಟೆನಿಸನ್, ಕುವೆಂಪು, ಟಾಗೋರ್.

## 2. ಕವಿನಿರಾಕರಣೆ

ಅಯ್ಯ, ಲಾರೆನ್ಸ್ ಸಿರಿಂಜ್—
ಕರೆದೊಯ್ದು ಎಕ್ಸಿಬಿಷನಿಂಗೆ ಕವಿಕಾರ್ನರಲಿ
ನಿಂತಿದ್ದರೆನ್ನ ಪ್ರಿಯ ಕವಿವರ್ಯರೆಲ್ಲ
ಅವರ ನುಡಿ ಬಿಳಲ ಬಿಟ್ಟಿತ್ತೆನ್ನ ಮನದಲ್ಲಿ
'ಊರ್ಧ್ವ ಮೂಲ ಮಧಃ ಶಾಖಂ ಅಶ್ವತ್ಥಂ'

ಆದರೋ–ತಂಬಾಕ ಸೇಳೆವ ಚಟ ನನಗೆ
( ಈ ಗುಟ್ಟನರಿತು ನೀನು)
ಕೊಡಿಸಿ ಬೀಡಿಯ ಕಳೆದೆ ಶ್ರೀ ಕುವೆಂಪುವನು
ಚಾರ‍್ಮಿನಾರಿನ ಧೂಮ ಚರಮ ಕೀಟ್ಸಿಂಗೆ
ಬರ‍್ಕಲಿಯಲಿ ಮುರಿದನಾ ವರ‍್ಡ್ಸ್ ವರ್ತ್
ಪ್ಲೇಯರ‍್ಸ್ ಮುಳುವಾಯ್ತು ಷೆಲ್ಲಿ ಪಿ. ಬಿ. ಗೆ.
ಕಾಫಿ ಬೀಡಕೆ ಮುಗಿದ ಕಾಳಿದಾಸ
ಕ್ಯಾರೋನಾ ಕಳೆದಿತ್ತು ಷೇಕ್ಸ್‌ಪಿಯರನನ್ನು
ಉಳಿದೆಲ್ಲ ಕವಿಗಳಿಗು ಅಡಕೆ ಪೊಟ್ಟಣ ಬಾಣ–
ಅಂತವಾಯಿತ್ತೆಲ್ಲ, ಭಾಗವತರೇ, ಈ ಒಂದು ಅಂಶ
ಈ ಹಳೆಯ ಕವಿಕುಲಕ್ಕಿಂದೆ ಧ್ವಂಸ
I did not know that I would undo so many.

### 3. ರೋಮಾಂಟಿಕರಿಗೆ ಗುಡ್ ಬೈ

ನಿಂದು ಪೇಳುವೆ ನಿಂದು ವಂದನ ರೋಮ್ಯಾಂಟಿಕರೆ
ಎಂದು ಬಂದಿರೊ ತೊಣಚಿಯಂತೆ ಕಾಡಿದಿರಿ
ಇಂದಿದೋ ನವ್ಯತೆಯ ಡೀಡಿಟಿ ಸ್ಪ್ರೇ ಹೊಡೆದು
ಕೊಂದು ನಿಮ್ಮನ್ನು ಮುಂದುವರಿವೆ ನವ್ಯತೆಗೆ
ಕಟ್ಟುವೆವು ನಾವು ಗೋರಿಯೊಂದನು ರೊಮಾಂಟಿಕರಿಂಗೆ
ಹಾಗೆಯೇ ನಿರ್ಬಲದ ಮೆದುಳ ಸಂಕಟಕೆ

ನಮಗೆ ಅದೆ ಬೇಕು
ಈ ಹೊಸದೆ ಬೇಕು

ಅಂತೆ ರೋಮ್ಯಾಂಟಿಕರೆ ವಂದನಂ
ಓ ನಿಲ್ಲು ನವ್ಯತೆಯ ಬಂದೆ ನಾಂ

— ಅ. ರಾ. ಸೇ.

---

**ಹಾದಿಯಲ್ಲಿ ಕೇಳಿಸಿದುದು—**

“ಶುದ್ಧ ಅನ್ಯಾಯ ಕಣ್ರೀ—ನ್ಯಾಯವಾಗಿ ಇಪ್ಪತ್ತು ಬರೋರಿಗೆ ಜಾಸ್ತಿ ಕೊಡಬೇಕಾಗಿತ್ತು. ಇನ್ನೂರು ಬರೋರಿಗೆ ಕಮ್ಮಿ ಕೊಟ್ಟಿದ್ರೂ ಪರವಾಗಿಲ್ಲ—ಏನೂಂತ ಈ ರೀತಿ ಮಾಡಿದರೋ ?”

# ಹುಟ್ಟಿಸಿದ ದೇವರು !

ತಿಮ್ಮಪ್ಪಯ್ಯ ಇಪ್ಪತ್ತೆಂಟರ ದಾಂಢಿಗ. ನುರಿತ ನಿರುದ್ಯೋಗಿ. ಭೂಮಿಗೆ ಭಾರವಾಗಿ ಹುಟ್ಟಿದೆಯಲ್ಲೋ ತಿಮ್ಮಪ್ಪಯ್ಯ ಅಂತ ಅವನ ಅಪ್ಪ ಒಂದು ದಿವಸ ಅಂದು ಅವನನ್ನು ಭೂಮಿಗೆ ಇಳಿಸಿದರು. ತಿಮ್ಮಪ್ಪಯ್ಯ ಶತಮೂರ್ಖ. ಧಂಡಜೀವಿ. ಅವನು ಭೂಮಿಗೆ ಇಳಿಯದೆ, ಊರಾಚೆ ತೋಪಿನಲ್ಲಿದ್ದ ಒಂದು ಆಲದಮರದಮೇಲೆ ಹತ್ತಿ ಮೂರುದಿವಸ ಅಲ್ಲೇ ಕೂತಿದ್ದ. ಕಡೆಗೆ ರಸಬಾಳೆಹಣ್ಣಿನ ಗೊನೆ ತೋರಿಸುತ್ತಲು ಕೆಳಕ್ಕೆ ಇಳಿದುಬಂದು ಮನೆ ಸೇರಿಕೊಂಡ. ತಿಮ್ಮಪ್ಪಯ್ಯನಿಗೆ ಯಾವ ಉದ್ಯೋಗವೂ ಸಿಕ್ಕದೆ ಹೋದುದರಿಂದ ಯತ್ನವಿಲ್ಲದೆ ಧೈರ್ಯವಾಗಿ ಮದುವೆಮಾಡಿಕೊಂಡು ಮಾವನ ಮನೆ ಸೇರಿದ. ನಾಲ್ಕುದಿವಸ ಹೊಸದರಲ್ಲಿ ಸುಖವಾಗಿ ಕಾಲ ಕಳೆದು ಸ್ನೋ ಹಚ್ಚಿಕೊಂಡು ಓಡಾಡಿದ !

ಮಾವನೂ ಮೊನ್ನೆ ಆಗಸ್ಟ್ 15ರ ದಿವಸ ಪೇಪರಿನಲ್ಲಿ ದ್ವಿತೀಯ ಪಂಚವಾರ್ಷಿಕ ಯೋಜನೆ ಓದುತ್ತ, 'ಬರೀ ದಂಡ ಪಿಂಡ ತಿನ್ನುತ್ತಿದ್ದೀಯಲ್ಲೋ, ತಿಮ್ಮಪ್ಪಯ್ಯ' ಅಂತ ಅಳಿಯನ ಹೊಟ್ಟೆಮೇಲೆ ಒದ್ದೆ ಬಟ್ಟೆ ಹೊದಿಸೇಬಿಟ್ಟರು. ಇನ್ನೂ ಬೆಳಗಿನ ಎಂಟು ಗಂಟೆ. ಅಡಿಗೆಮನೆಯಿಂದ ಮಸಾಲೆದೋಸೆಯ ವಾಸನೆ ಬೇರೆ ಬರುತ್ತಿದೆ. ತಿಮ್ಮಪ್ಪಯ್ಯನ ಕಣ್ಣು ಅರಿಯುವುದಕ್ಕಿಂತ ಮುಂಚೆಯೇ ಕರಳರಿತು ಮಸಾಲ್‌ದೋಸೆಗೋಸ್ಕರ ಒದ್ದಾಡುತ್ತಿತ್ತು. ಸಾಕ್ಷಾತ್ ಕೈಹಿಡಿದ ಹೆಂಡತಿಯೇ ತಟ್ಟೆಯಲ್ಲಿ ನಾಲ್ಕು ದೋಸೆಗಳನ್ನು ಪೇರಿಸಿಕೊಂಡು ಬಂದು ತಿಮ್ಮಪ್ಪಯ್ಯನ ಎದುರಿಗೇನೇ ಗಂಡನಿಗೆ ಕೊಡದೆ ತಿನ್ನುತ್ತ ಕುಳಿತುಕೊಂಡಳು. ಆ ಗಳಿಗೆಯಲ್ಲೇ ತಿಮ್ಮಪ್ಪಯ್ಯನಿಗೆ ಜೀವನ ಕಷ್ಟ ಎಂದು ತೋಚಿದ್ದು ! ಆ ರುದ್ರರಮಣೀಯ ದೃಶ್ಯವನ್ನು ನೋಡಲಾರದೆ ತಿಮ್ಮಪ್ಪಯ್ಯ ಕೂಲಿಂಗ್‌ಗ್ಲಾಸ್ ಹಾಕಿಕೊಂಡು ಬೀದಿಯಲ್ಲಿ ಹೊರಟ. ಉಡಿಪಿ ಆನಂದ ಭವನ ಧಾಟಿದ. ಬೊಂಬಾಯಿ ಆನಂದ ಭವನ ಸಿಕ್ಕಿತು. ಆಮೇಲೆ ಇಂದ್ರಭವನ ಕಾಣಿಸಿತು. ಇನ್ನೂ ಮುಂದಕ್ಕೆ ಹೋದಮೇಲೆ ಬ್ರಹ್ಮೇಂದ್ರಭವನದ ಬೋರ್ಡು ಕಾಣಿಸಿತು ! ತಿಮ್ಮಪ್ಪಯ್ಯನ ಉದರಸಂಕಟ ಮಿದುಳನ್ನು ಒತ್ತುತ್ತಿತ್ತು. ಉಬ್ಬಿದ್ದ ಅವನ ಮಹೋದರ ಸಂಕಟದಿಂದ ಇಸ್ತ್ರಿ ಕಾಣದ ಗಾಂಧಿಟೋಪಿಯಂತೆ ಸೊರಗಿ ಮುದುರಿಕೊಂಡಿತು ! ತಿಮ್ಮಪ್ಪಯ್ಯನಿಗೆ ಬದುಕು ವ್ಯರ್ಥ ಎಂದೆನಿಸಿತು. ಅವನು ಕೆಲಸಕ್ಕಾಗಿ ಅರ್ಜಿಗಳನ್ನು ರವಾನಿಸಲು ಖರ್ಚುಮಾಡಿದ್ದ ದುಡ್ಡಿಗೆ ಎಷ್ಟು ದೋಸೆಗಳು ಬರುತ್ತಿತ್ತು ಎಂಬುದನ್ನು ಲೆಕ್ಕಾಚಾರ

ಹಾಕಿ ನಿರ್ಧರಿಸಿದ. ಅಷ್ಟನ್ನೂ ತಿಂದಿದ್ದರೆ ತನಗೆ ಎಷ್ಟು ಚೈತನ್ಯ ಬರುತ್ತಿತ್ತು ಎಂಬುದನ್ನು ಸಂಬಂಧಪಟ್ಟ (ಚೈತನ್ಯ=MC²) ಸೂತ್ರದಿಂದ ಕಂಡುಹಿಡಿದ! ತಿಮ್ಮಪ್ಪಯ್ಯ ಬಲು ಬುದ್ಧಿವಂತನಾದರೂ ಮುಂದುವರಿದ ಕೋಮಿಗೆ ಸೇರಿದವನಾದ್ದರಿಂದ ಅವನ ಅರ್ಜಿಗಳೆಲ್ಲ ಹಿಂದಕ್ಕೆ ಒದೆಯಲ್ಪಟ್ಟಿತ್ತು. ಆದ್ದರಿಂದ ಪರದೇಶದಲ್ಲಿರುವ ಸೂಯಜ್ ಕಾಲುವಿಗೆ ಬಿದ್ದು ಪ್ರಾಣ ಕಳೆದುಕೊಳ್ಳುವುದೇ ಸುರಕ್ಷಿತ ಅಂತ ತಿಮ್ಮಪ್ಪಯ್ಯ ನಿರ್ಧರಿಸಿಕೊಂಡ!

ಆದರೆ ಹುಟ್ಟಿಸಿದ ದೇವರು ತಿಮ್ಮಪ್ಪಯ್ಯನ ಹೊಟ್ಟೆಗೆ ಮಸಾಲೆ (ಹುಲ್ಲು!) ತೋರಿಸದೆ ಇರುತ್ತಾನೆಯೆ?

ಅದೇ ಊರಿನ ರಾಮಾಭಟ್ಟನಿಗೆ ಮೈಮೇಲೆ ತಿರುಪತಿ ವೆಂಕಟರಮಣಸ್ವಾಮಿ ಬರುತ್ತಿದ್ದ! ರಾಮಾಭಟ್ಟನಿಗೆ ವಾರಕ್ಕೆರಡಾವರ್ತಿ ವೆಂಕಟರಮಣಸ್ವಾಮಿ ಕಾಣಿಸಿಕೊಳ್ಳುತ್ತಿದ್ದುದರಿಂದ; ಆ ಕಾಲದಲ್ಲಿ ಊರಿನ ಭಕ್ತಶಿರೋಮಣಿಗಳಿಗೆಲ್ಲ ವೆಂಕಟರಮಣನ ಹಣೇಬರಹವೇ ಪ್ರಾಪ್ತವಾಗುತ್ತಿತ್ತು. ಅವರು ರಾಮಾಭಟ್ಟನಿಗೆ ಹಣ್ಣುಕಾಯಿ ಕಾಣಿಕೆ ಕೊಟ್ಟು ದೇವರ ಸೇವೆ ನಡೆಸುತ್ತಿದ್ದರು. ರಾಮಾಭಟ್ಟನ ಜೀವನ ಲೀಲಾಜಾಲವಾಗಿ ಸಾಗುತ್ತಿತ್ತು! ಅಂದು ತಿಮ್ಮಪ್ಪಯ್ಯನಿಗೆ ಹೊಟ್ಟೆ ಬೆನ್ನಿಗೆ ಹತ್ತಿಕೊಂಡಿದ್ದರಿಂದ ಅವನು ಅದೃಷ್ಟದ ಬೆನ್ನು ಹತ್ತಿದ. ದೇವಸ್ಥಾನದ ಜಗುಲಿಯ ಮೇಲೆ ರಾಮಾಭಟ್ಟ ವೆಂಕಟರಮಣನ ಭಜನೆ ಮಾಡುತ್ತ ಭಕ್ತಶಿರೋಮಣಿಗಳಿಗೆ ಹೊಂಚುಹಾಕುತ್ತ ಕೆಲಸ ಪ್ರಾರಂಭಿಸಿದ್ದ! ಪ್ರಶ್ನೆ ಕೇಳುವವರು, ಯಂತ್ರ ಕಟ್ಟಿಸುವವರು, ಮಂತ್ರ ಹಾಕಿಸುವವರು ನೂರಾರುಜನ ಸಿದ್ಧವಾದರು. ರಾಮಾಭಟ್ಟ ಬೇವಿನಸೊಪ್ಪು, ಪರಕೆ, ಬೂದಿ ಮುಂತಾದ ಸಾಮಗ್ರಿಗಳನ್ನು ಸಿದ್ಧಮಾಡಿಕೊಂಡು ನೆರೆದಿದ್ದ ಭಕ್ತಾದಿಗಳಿಗೆ ತಿರುಪತಿಯ ಮಹಾತ್ಮೆಯನ್ನು ವರ್ಣಿಸುತ್ತಿದ್ದ!

ತಿಮ್ಮಪ್ಪಯ್ಯ ತನ್ನ ಸಹ ನಿರುದ್ಯೋಗಿಯಾದ ಶೀನಪ್ಪನನ್ನೂ ಕರೆದುಕೊಂಡು ಅಲ್ಲಿಗೆ ಬಂದು ಕೂತುಕೊಂಡ. ಪುರಾಣವನ್ನು ಹೇಳುತ್ತಿದ್ದ ರಾಮಾಭಟ್ಟ ಕೆಲವೇ ನಿಮಿಷಗಳಲ್ಲಿ ವಾಲಾಡಲು ಪ್ರಾರಂಭಿಸಿದ. ತೋಳು ಬೀಸಿದ. ಕಣ್ಣು ಮುಚ್ಚಿದ. ಆವೇಶಪೂರಿತನಾಗಿ ಬಾಯಿಗೆ ಬಂದಿದ್ದನ್ನು ಒದರಲು ಪ್ರಾರಂಭಿಸಿದ. ಭಕ್ತಾದಿಗಳು ಕಾಣಿಕೆ ಒಪ್ಪಿಸಿ ಪ್ರಶ್ನೆ ಕೇಳುವುದಕ್ಕೆ ಸಿದ್ಧವಾದರು!

ಅದೇ ಸಮಯವನ್ನು ಕಾಯುತ್ತ ಭಕ್ತಕೋಟಿಯ ಮಧ್ಯೆ ಕುಕ್ಕಟಾಸನ ಹಾಕಿಕೊಂಡು ಕೂತಿದ್ದ ತಿಮ್ಮಪ್ಪಯ್ಯ ಹಲ್ಲುಮುಡಿ ಕಚ್ಚಿಕೊಂಡು ಛಂಗನೆ ಮೂರಡಿ ಮೇಲಕ್ಕೆ ಹಾರಿ ದೊಪ್ಪನೆ ನೆಲದಮೇಲೆ ಬಿದ್ದು ಶವಾಸನ ಹಾಕಿದ ಪಕ್ಕದಲ್ಲೇ ಇದ್ದ ಶೀನಪ್ಪ, ಅವನನ್ನು ಕೂರಿಸಿ ಪರಕೆಯಲ್ಲಿ ನೀವಳಿಸುತ್ತ "ಆಂಜನೇಯ ರಾಮನ ಬಂಟ; ತಿರುಪತಿ ಎಂಬುದು ವೈಕುಂಠ!" ಅಂತ ಭಜನೆಗೆ ಪ್ರಾರಂಭಿಸಿದ! ಅಷ್ಟು

ಹೊತ್ತಿಗೆ ತಿಮ್ಮಪ್ಪಯ್ಯ ಗಟ್ಟಿಯಾಗಿ "ಲೋ ವೆಂಕಟರಮಣ! ನಾನಿಲ್ಲಿರೋವಾಗ ನೀನು ಇಲ್ಲೀಗೆ ಹೇಗೆ ಬಂದೆ, ಇದು ನನ್ನ ಜೂರಿಸ್‌ಡಿಕ್ಷನ್ನು, ಮೊದಲು ಇಲ್ಲಿಂದ ಹೊರಟುಹೋಗು, ಇಲ್ಲದೆಹೋದರೆ........ನಿನ್ನ" ಎಂದು ಕೂಗುತ್ತ, ನಿನ್ನ ಕತ್ತನ್ನ ತಿರುಚಿಬಿಸಾಡುತ್ತೇನೆ ಎನ್ನುವ ರೀತಿಯಲ್ಲಿ ಕೈಯನ್ನು ತೋರಿಸುತ್ತ ಮೂರಡಿ ಛಂಗನೆ ಮೇಲಕ್ಕೆ ನೆಗೆದು ಕುಕ್ಕರಿಸಿದ! ರಾಮಾಭಟ್ಟ ನಡುಗಿಹೋದ. ಅವನ ಆವೇಶ, ವಾಲಾಟಗಳೆಲ್ಲ ನಿಂತುಹೋಯಿತು ಭಕ್ತಾದಿಗಳು ಕಕ್ಕಾಬಿಕ್ಕಿಯಾಗಿ ನೋಡುತ್ತಿದಾರೆ. ರಾಮಾಭಟ್ಟನಿಗೆ ತುಂಬ ಸಮಯ ಸ್ಫೂರ್ತಿ. ಈಗ ಹೆದರಿಕೊಂಡು ಓಡಿದರೆ ಮೂಳೆ ಯಾವುದೂ ಉಳಿಯುಲ್ಲ ಎನ್ನುವ ಸೂಕ್ಷ್ಮ ಅವನಿಗೆ ಗೊತ್ತಾಗಿಹೋಯಿತು. ಈ ತಿಮ್ಮಪ್ಪಯ್ಯನ ಉದರವೇದನೆಯನ್ನು ಅರ್ಥಮಾಡಿಕೊಂಡು ರಾಮಾಭಟ್ಟ ಒಂದು ಉಪಾಯ ಹೂಡಿದ. ಅವನು ಮತ್ತೆ ಆವೇಶವನ್ನು ಧಾರಣೆ ಮಾಡಿ ತೂಗಾಡುತ್ತ "ಆಂಜನೇಯ ಮಹಾಪ್ರಭು, ನೀನು ಇಲ್ಲಿಗೆ ಬಂದ ಸಮಾಚಾರ ನನಗೆ ತಿಳಿಯದೋ ಕಣಪ್ಪ! ನೀನೇ ಖುದ್ದು ಬಂದಿರೋವಾಗ ನನಗೆ ಇಲ್ಲೇನು ಕೆಲಸ ವಿದೆಯೋ; ಇಗೋ ಹೊರಟೆ; ಕ್ಷಮಿಸೋ ನಮ್ಮಪ್ಪ" ಎಂದು ಅಡ್ಡಬಿದ್ದು ಮೇಲಕ್ಕೆದ್ದ. ನೆರೆದಿದ್ದ ಜನರೆಲ್ಲ ಈ ಅದ್ಭುತವನ್ನು ಕಣ್ಣಾರೆ ಕಂಡದ್ದಕ್ಕೆ ಹಿಗ್ಗುತ್ತ ತಂದಿದ್ದ ಕಾಯಿಗಳನ್ನೆಲ್ಲ ತಿಮ್ಮಪ್ಪಯ್ಯನ ಮುಂದೆ ಒಡೆದು ಕಾಣಿಕೆ ಒಪ್ಪಿಸಿ ಪ್ರಶ್ನೆ ಕೇಳಿದರು. ಮಾರುತಿ ಪ್ರೇರಣೆಯಂತೆ ತಿಮ್ಮಪ್ಪಯ್ಯ ಎಲ್ಲರಿಗೂ ಉತ್ತರ ಹೇಳಿದ. ಸುಮಾರು ಹತ್ತು ಹದಿನೈದು ರೂಪಾಯಿ ವಸೂಲಾಗಿತ್ತು.

ಹೊಟ್ಟೆ ತಾಳ ಹಾಕುತ್ತಿದ್ದರೂ ತಿಮ್ಮಪ್ಪಯ್ಯನ ಮುಖದಲ್ಲಿ ಹೊಸ ಕಳೆ ಕೂಡಿಕೊಂಡಿತ್ತು. ಶೀನಪ್ಪ ಭಜನೆ ಮಾಡುತ್ತಲೇ ಇದ್ದ!

— ಹಾ. ರಾ.

---

**ಹಿಂದೆ ಕೇಳಿದ್ದರೆ—ಕ್ಷಮಿಸಿ**

"ಛೇ, ಛೇ—ಹಾಗಲ್ರೀ—ಸರಿಯಾಗಿ ಕೇಳಿ. ಈ ಸಾರಿ ದಸರಾಕ್ಕೆ ನಂಗೆ ಮೈಸೂರಿಗಲ್ಲಾ ಹೋಗುಕ್ಕಾಗ್ದೇ ಇದ್ದದ್ದು—ಕಲ್ಕತ್ತಾಕ್ಕೆ! ಹೋದ ದಸರಾಲಿ ಮೈಸೂರಿಗೆ ಹೋಗೋಕಾಗ್ಲಿಲ್ಲ"

— "ಕೇಫ"

# ಔರಂಗಜೇಬು ಪಾರ್ಕು

ಇತ್ತ ಇಂಡಿಯಾದಲ್ಲಿ, ಬೀದಿ, ಗಲ್ಲಿ, ಕೇರಿ, ಕುಂಟೆ, ಚೌಕ, ಚರಂಡಿಗಳ ಹೆಸರುಗಳನ್ನು ಬದಲಾಯಿಸುವ ಕಾರ್ಯಕ್ರಮ ಒಂದು ಹದದಲ್ಲಿ ಸಾಗುತ್ತಿರುವಾಗ, ಅತ್ತ ಪಾಕಿಸ್ಥಾನದವರು ಆ ಕಾರ್ಯಕ್ರಮಕ್ಕೆ ಒಂದು ಹೊಸ ಮೆರಗು ಕೊಟ್ಟು ತಮ್ಮ ಪ್ರಗತಿಶೀಲತೆಯನ್ನು ಕಾಯ್ದುಕೊಂಡಿದ್ದಾರೆ. ಮೊನ್ನೆ ಕರಾಚಿಯ ಶಿವಾಜಿ ಪಾರ್ಕಿಗೆ ಅವರು ಜಿನ್ನಾ ಪಾರ್ಕು, ಲಿಯಾಖತ್ ಪಾರ್ಕು, ಕೊನೆಗೆ ನ್ಯಾಷನಲ್ ಪಾರ್ಕು ಎಂದು ಮುಂತಾಗಿ ಯಾವ ಹೆಸರನ್ನೂ ಇಡದೆ ಔರಂಗಜೇಬ್ ಪಾರ್ಕ್ ಎಂತಲೇ ಕರೆಯಲು ನಿರ್ಧರಿಸಿದರು. ಶಿವಾಜಿಗೆ ಔರಂಗಜೇಬ್—ಹೇಗಿದೆ! ಪಾಪ ಚರಿತ್ರೆ ಚೆನ್ನಾಗಿ ಓದಿಕೊಂಡವರು. ಕ್ರಮೇಣ, ಗಾಂಧಿರಸ್ತೆ, ಸುಭಾಷ್ ಚೌಕ ಅಂತ ಅಲ್ಲೇನಾದರೂ ಉಳಿದಿದ್ದರೆ ಅವುಗಳಿಗೆಲ್ಲ ಯಥಾ ಯೋಗ್ಯವಾದ ಹೆಸರುಗಳನ್ನು ಕೊಡದೆ ಇರಲಾರರು. ಗಾಂಧಿ ರಸ್ತೆಗಳನ್ನೆಲ್ಲ 'ಗೋಡ್ಸೆ ರಸ್ತೆ' ಎಂದು ಕರೆದರೂ ಕರೆದರೇ!

ಇನ್ನೊಂದು ವಿಚಾರದಲ್ಲಿಯೂ ಅವರು ಇದೇ ನೀತಿಯನ್ನು ಅನುಸರಿಸಬಹುದು. ಪಾಕಿಸ್ತಾನದಲ್ಲಿ ದೇವಸ್ಥಾನಗಳೇನಾದರೂ ಉಳಿದಿದ್ದರೆ ಅಲ್ಲಿಯೂ ಕೆಲವು ಬದಲಾವಣೆಗಳಿಗೆ ಅವಕಾಶವಿದೆ—ರಾಮ ಮಂದಿರಗಳನ್ನೆಲ್ಲ ರಾವಣಾಲಯಗಳಾಗುವಂತೆ ಮತ್ತು ಶಿವಾಲಯಗಳು ಮನ್ಮಥನ ಗುಡಿಗಳಾಗುವಂತೆ ಒಂದು ಆಜ್ಞೆ ಹೊರಡಿಸಿದರೆ ಏನಾಗುತ್ತದೆ!

ಭಾರತ ಸರಕಾರಕ್ಕೆ ಪಕ್ಷದವರನ್ನು ಅನುಸರಿಸುವ ಬುದ್ಧಿ ಬರಲಾರದು. ಆದರೂ ನಮ್ಮೂರಿನ ಸಮೀಪದ 'ಎಣ್ಣೆ ಮಡಿ' ಎಂಬ ಹಳ್ಳಿಯನ್ನು 'ಸೀಗೆ ಮಡಿ' ಎಂದಾದರೂ ಕರೆಯಬೇಕೆಂದು ಚಪಲ ಇದೆ. ಕೊನೆಗೆ ಬೆಂಗಳೂರಿನ 'ಸೀಗೆ ಬೇಲಿ' 'ಎಣ್ಣೆ ಭಾವಿ' ಯಾಕಾಗಬಾರದು?

— ರಾಮಿ.

# ಗುಜರಿ

---

ಹೋದವಾರ ನನಗೆ ಏನೋ ಕತ್ತರಿಸೋಕೆ ಸಣ್ಣ ಕತ್ತರಿ ಬೇಕಾಗಿತ್ತು. ನನ್ನಾಕೇನ ಕೇಳಿದೆ.

"ಚೆಸ್ಟಾಫ್‌ಡ್ರಾನ ಎಡಪಕ್ಕದ ಮೇಲಿನ ಡ್ರಾಯರ್‌ನಲ್ಲಿ ಕನ್ನಡಿ ಕೆಳಗಿದೆ —ತಕೊಳ್ಳಿ '

ಚೆಸ್ಟಾಫ್‌ಡ್ರಾನ ಎಡಪಕ್ಕದ ಮೇಲಿನ ಡ್ರಾಯರ್ ಹುಡುಕಿದ್ದಾಯ್ತು. ಅನಾಮತ್ತು ಕೆಳಗಿಳಿಸಿ ತಳಕೆಳಗು ಮಾಡಿದ್ದಾಯ್ತು. ಹದಿನಾಲ್ಕು ಡಬ್ಬಿ ಮುಚ್ಚಳಗಳು, ಏಳು ಅಮೃತಾಂಜನ ಖಾಲಿ ಶೀಷೆಗಳು, ಐದಾರು ಫರ್ಲಾಂಗ್ ಉದ್ದ ದಾರ, ಆರು ಮುರುಕು ಹಣಿಗೆಗಳು, ಒಂದು ಸಿಲೋಲೇಡ್ ಗಿಣಿ ಸಿಕ್ಕಿದವು. ಕನ್ನಡಿ ಇರಲಿಲ್ಲ. ಕತ್ತರಿ ಸಿಗಲಿಲ್ಲ. ಪುನಃ ನನ್ನಾಕೆಯನ್ನೇ ಕೇಳಿ ಹುಡುಕಿಸಿದೆ—ಅದೇ ಚೆಸ್ಟಾಫ್‌ಡ್ರಾನ ಎಡಪಕ್ಕದ ಮೇಲಿನ ಡ್ರಾಯರಿನಿಂದ ಕನ್ನಡಿ ಕತ್ತರಿ ಹೊರಬಂದವು. ಇದು—ಮಹಿಳೆಯರಿಗೂ ಅವರು ಸಾಮಾನುಗಳಿಡುವ ಉಗ್ರಾಣಗಳಿಗೂ ಇರುವ ಗುಟ್ಟು!

ಈ ಮುರುಕಲು ಹರುಕಲು ಸಾಮಾನುಗಳನ್ನು ಶೇಖರಿಸಿಡುವುದು ಮಹಿಳೆಯರಿಗೆ ಒಂದು ಜಾಡ್ಯ. ಈ ಜಾಡ್ಯ ಯಾವ ಮಹಿಳೆಯನ್ನೂ ಬಿಟ್ಟಿಲ್ಲ. ಬೇಕಾದರೆ ಇವತ್ತೇ ಹೋಗಿ ನೀವು-ಇಂಗ್ಲೆಂಡಿನ ರಾಣಿ ಎಲಿಜಬೆತ್ತಳ ಪೆಟ್ಟಿಗೆ ತೆಗೀರಿ—ಒಂದು ಗುಜರಿ ಇದ್ದೇ ಇರುತ್ತೆ!

ಆದರೆ—ಪ್ರತಿಯೊಬ್ಬರದೂ ಒಂದೇ ತೆರವಾದ ಗುಜರಿ ಇರುವುದಿಲ್ಲ. ನಮ್ಮ ವೆಂಕು ಪತ್ನೀದು—ದಾರಗಳ ಸ್ಪೆಷಾಲಿಟಿ. ಆಕೆ ಹತ್ತಿರ ಎಂತಹ ದಾರವಾದರೂ ಸಿಗುತ್ತಂತೆ! ಕೂದಲಿನಷ್ಟು ಘಾತ್ರದಿಂದ ಹಿಡಿದು ಭಾವಿ ಹಗ್ಗದವರೆವಿಗೂ ಸಿಗುತ್ತೆ —ಮೈಲಿಗಟ್ಟಳೆ ದಾರವನ್ನು ಉಂಡುಂಡೆಯಾಗಿ ಸುತ್ತಿ ಮನೆಯಲ್ಲಿ ಪೆಟ್ಟಿಗೆಗಳೆಲ್ಲಾ ಭರ್ತಿ ಮಾಡಿಟ್ಟಿದ್ದಾರೆ ಆಕೆ—ವೆಂಕು ಬಟ್ಟೆಗಳಿಗೇ ಜಾಗವಿಲ್ಲ. ಏಕೆ?—ಇಲ್ದಿ ಸುವ್ನಿರಿ—ಉಪಯೋಗಕ್ಕೆ ಬರುತ್ವೆ!

ಕಿಟ್ಟಾಚಾರಿ ಮನೇಲಿ ಮತ್ತೊಂದು ರಖಂ ಗುಜರಿ ಇದೆ. ಕಿಟ್ಟಾಚಾರಿಗೆ ಈಗ್ಯೆ 6 ತಿಂಗಳು ಹಿಂದೆ—12 ಮಕ್ಕಳಿದ್ದುವು—ಈಗ 13 ಆದರೂ ಇದ್ದೇ

ಇರಬೇಕು. ಒಂದು ಪೆಟ್ಟಿಗೆ ತುಂಬಾ ಹಳೇ ಬಾಟಲುಗಳು, ಅರ್ಧ ಉಪಯೋಗಿಸಿದ ಔಷಧಿಗಳು, ಮುಲಾಮುಗಳು, ಲೇಹ್ಯಗಳು, ಒಣಗಿದ ಬೇರುಗಳು, ಒಣಗಿದ ಎಲೆಗಳು—ಯಾವತ್ತಾದರೂ ಉಪಯೋಗಕ್ಕೆ ಬಂದೇ ಬರುತ್ವೆ. ಬೇಕಾದಾಗ ಯಾರನ್ನ ಕೇಳೋದು?

ಇದೆಲ್ಲಾ ನೋಡಿ, ಹೀಗೆ ಮಹಿಳೆಯರು ಶೇಖರಿಸಿಡಬಹುದಾದ ಸಾಮಾನುಗಳನ್ನು ಈ ರೀತಿ ವಿಂಗಡಿಸಿದ್ದೇನೆ.

## 1. ವಸ್ತುಗಳ ಮೇಲಿನ ಸಾಮಾನುಗಳು

ಬಾಟಲುಗಳ ಮುಚ್ಚಳಗಳು, ತಟ್ಟೆಗಳು, ಜಾಡಿಯ ಬಿರಟೆಗಳು, ಥರ್ಮಾಸ್ ಫ್ಲಾಸ್ಕಿನ ಲೋಟಗಳು, ಕಾರ್ಕುಗಳು, ಸೋಪ್ ಪೆಟ್ಟಿಗೆ ಮುಚ್ಚಳಗಳು, ಕುಲ್ಲಾವಿಗಳು.

## 2. ವಸ್ತುಗಳಿಂದ ಕಿತ್ತುಬರುವ ಸಾಮಾನುಗಳು

ಗುಂಡಿಗಳು, ಕೊಂಡಿಗಳು, ಬಿಜಾಗರಿಗಳು, ಚಿಲಕಗಳು, ಮೊಳೆಗಳು, ತಿರುಪುಗಳು, ಬೋಲ್ಟುಗಳು, ಪಾತ್ರೆಗಳ ಹಿಡಿಗಳು, ಕಾಲುಗಳು, ಮಣಿಗಳು.

## 3. ವಸ್ತುಗಳನ್ನು ಸುತ್ತುವ ಸಾಮಾನುಗಳು

ಕಾಗದದ ಚೀಲಗಳು, ಕಾಗದದ ಪೆಟ್ಟಿಗೆಗಳು, ಟಿನ್ ಪೆಟ್ಟಿಗೆಗಳು, ಸೋಪಿನ ಕಾಗದಗಳು, ಹಳೇ ಪೋಸ್ಟು ಕವರುಗಳು. (ಯಾವುದಾದರೂ ಟಿನ್ ಡಬ್ಬಿಯನ್ನು ನಿರಾಕರಿಸಿದ ಮಹಿಳೆ ಈ ಪ್ರಪಂಚದಲ್ಲುಂಟೇ?)

## 4. ಹೊರಕ್ಕೆ ಬಿಸಾಡಲು ಮನಸ್ಸು ಬಾರದ ಸಾಮಾನುಗಳು

ಹಳೇ ಇಸ್ಪೇಟು ಪ್ಯಾಕು—ಎರಡು ರಾಣಿ, ಒಬ್ಬ ಗುಲಾಮ, ಒಬ್ಬ ರಾಜ ಗೈರ್‌ಹಾಜರು—ಹರಿದುಹೋದ ರಿಬ್ಬನ್ನುಗಳು, ಹಲ್ಲಿಲ್ಲದ ಹಣಿಗೆಗಳು, ಕೈಯಿಲ್ಲದ ಸಿಲೋಲೇಡ್ ಬೊಂಬೆಗಳು, ಗೌರೀಹಬ್ಬದ ಮಾಸಲು ಕನ್ನಡಿಗಳು, ಕರೀ ಬಳೆಗಳು, ಬಿಚ್ಕೋಲೆ ಸರ, ಚೈನಾ ನಾಯಿ–ಬಾಲವಿಲ್ಲದ್ದು, ಹಳೇ ಲಗ್ನಪತ್ರಿಕೆಗಳು, ಮುರಿದ ಕ್ರೋಷಾಕಡ್ಡಿ.

## 5. ಹಳೆಯ ನೆನಪಿನ ಸಾಮಾನುಗಳು

ತನ್ನ ಸ್ನೇಹಿತಿ ಕೊಟ್ಟ ಪಿನ್ನು, ತಾನು ಓದುತ್ತಿದ್ದಾಗ ಉಪಯೋಗಿಸಿದ ಪೆನ್ನು–ಈಗ ಅದಕ್ಕೆ ನಾಲಿಗೆಯಿಲ್ಲ–ಸೀರೆಯ ಜರತಾರಿ, ಮೊದಲನೆಯ ಶಿಶುವಿಗೆ ತಂದ ರಂಗಾಣಿ ಗಿಲಕೆ.

ಇನ್ನೂ ಸಂಶೋಧನೆ ಮುಗಿದಿಲ್ಲ.

ಇದೇ ಚಾಳಿ-ಗಂಡಸರಿಗಿಲ್ಲ. ಅಂದರೆ — ಹಳೇ ಸಾಮಾನುಗಳು ಅವರ ಹತ್ತಿರ ಇಲ್ಲವೆಂದಲ್ಲ- ಇರುತ್ವೆ. ಆದರೂ-ಅದಕ್ಕೆ ಅರ್ಥವಿದೆ. ನನ್ನ ಹತ್ತಿರ ಈಗ, ಹಿಂದಿನ ವರ್ಷಗಳ ಸೈಕಲ್ ಲೈಸೆನ್ಸುಗಳಿವೆ, ಹಳೇ ಬೀಗದ ಕೈಗಳು, ಹಳೇ ಬ್ಲೇಡು ಗಳು, ಟಾರ್ಚಿನ ಹಳೇ ಸೆಲ್ಲುಗಳು, ಸ್ವಲ್ಪ ಮುರಿದ ಸೈಕಲ್ ಕ್ಲಿಪ್ಪು-ಇವೆ. ಸಮಯಕ್ಕೆ ಉಪಯೋಗಕ್ಕೆ ಬರುತ್ವೆ. ಬೇಕಾದಾಗ ಯಾರನ್ನ ಕೇಳಲಿ?

ಗುಜರಿ-ಅನ್ನುತ್ತಲೂ-ನಂಗೆ ಅಡಿಗೆ ಮನೆ ಜ್ಞಾಪಕಕ್ಕೆ ಬರುತ್ತೆ. ನಿಮ್ಮ ಅಡಿಗೆ ಮನೆ ನೋಡಿದ್ದೀರಾ? ವೆಂಕೂನ ಕೇಳಿ-ಹೇಳ್ತಾನೆ. ಒಂದು ಬಾರಿ ಅವನ ಆಕೆ ಊರಿಗೆ ಹೋಗಿದ್ದಾಗ ತಾನೆ ಅಡಿಗೆ ಮಾಡುಕ್ಕೆ ಹವಣಿಸಿಕೊಂಡ, ಮೊದಲು ಕಾಫಿ ಮಾಡೋಕೆ ಹೋಗಿ "ಕಾಫಿ ಫೌಡ್ರು" ಅಂತ ಬರೆದಿದ್ದ ಡಬ್ಬ ತೆಗೆದ. ಬಿಳೀ ಪುಡಿ ಇತ್ತು. ರುಚಿ ನೋಡಿದ-ಉಪ್ಪು! ಸರಿ. ಹಗಲೆಲ್ಲಾ ಅಡಿಗೆಯ ಮನೆಯನ್ನು ಸರಿಪಡಿಸಿ, ಕಾಫಿ ಫೌಡ್ರು ಡಬ್ಬದಲ್ಲಿ ಕಾಫಿ ಪುಡೀನ, ಸಕ್ರೆ-ಡಬ್ಬದಲ್ಲಿ ಸಕ್ಕರೇನ, ಮೆಣಸಿನ ಪುಡೀ ಡಬ್ಬದಲ್ಲಿ ಮೆಣಸಿನ ಪುಡೀನ- ಹೀಗೆ ಆಯಾ ಡಬ್ಬದಲ್ಲಿ ಆಯಾ ಸಾಮಾನುಗಳನ್ನು ಹಾಕಿ ನಮ್ಮ ಮನೇಗೆ ಕೂಳಿಗೆ ಬಂದ. ಊರಿಂದ ಬಂದ ಮೇಲೆ ಅವನಾಕೆ

'ಅಡಿಗೆ ಮನೇನೆಲ್ಲಾ ಧಾಂಧೂಂ ಮಾಡಿ ಬಿಟ್ರಿ-ಇನ್ನು ಒಂದುವಾರ ಬೇಕು ನನಗೆ' ಅಂತ ಗೊಣಗಿದರಂತೆ.

ಈ ತಾಪತ್ರಯ ನಮ್ಮ ಮನೆಯಲ್ಲಿಲ್ಲ-ಈಗ. ನಾನು ಕತ್ತರಿ ಹುಡುಕಿದ ಕಷ್ಟ ಅನುಭವಿಸಿದ ಮೇಲೆ-ಮನೆಯನ್ನು ಒಂದು ವಿಧವಾದ ಹತೋಟಿಗೆ ತಂದಿದ್ದೇನೆ. ಆಯಾ ಸಾಮಾನು ಆಯಾ ಜಾಗದಲ್ಲಿರಬೇಕು. ಬೇಡವಾದ ಸಾಮಾನು ಒಂದು ಕಡೆ ಇರಬೇಕು-ಬೇಕಾದಾಗ ಸಿಗಬೇಕು. ಒಂದು ಪಿನ್ನು ಕೂಡ ಸಿಗೋ ಹಾಗಿರ ಬೇಕು-ಹಾಗಿದೆ ನಮ್ಮ ಮನೆ ಈಗ. ಅದರ ಗುಟ್ಟು ನಿಮಗೆ ಹೇಳ್ತೀನೆ. ಮುಖ್ಯ ವಾಗಿ ಹೇಳೋದಾದ್ರೆ (ಸಂಪಾದಕರು— ಈ ಲೇಖನದ ಮಿಕ್ಕ ಹಾಳೆಗಳು ಇಲ್ಲೇ ಇಟ್ಟಿದ್ದೆ—ಮಾಯವಾಗಿವೆ. ಸಿಕ್ಕಿಲ್ಲ. ಸಮಯ ಸಾಲದ್ದರಿಂದ ಹಾಗೇ ರವಾನಿಸಿ ದ್ದೇನೆ.)

—"ಕೇಫ"

———o———

**ವೈದ್ಯರಲ್ಲಿ ವಿಷನಿಮಿಷಗಳು—**

"ಕೂಡಲು ವಿಪರೀತ ಉದುರ್ತಾ ಇದೆಯಲ್ಲಾ-ಡಾಕ್ಟ್ರೇ-ಏನು ಮಾಡಲಿ?"

"ಪಕ್ಕಕ್ಕೇ ಸರೀರಿ"

# ನೆಹರೂ ಹಿಂದಿರುಗಿದ ಮೇಲೆ

ಪಂಡಿತ್ ನೆಹರೂ ಕಾಮನ್‌ವೆಲ್ತ್ ಪ್ರಧಾನಿಗಳ ಸಮ್ಮೇಳನದಲ್ಲಿ ಭಾಗವಹಿಸಲು ಲಂಡನ್ನಿಗೆ ಹೋಗಿದ್ದರಲ್ಲ. ಆಗ ಭಾರತದಲ್ಲಿ ಎಷ್ಟೋ ಕೆಲಸಗಳು ಅವರನ್ನು ಕಾಯುತ್ತ ನಿಂತವು.

ಮೈಸೂರಿನ ನಾಯಕತ್ವದ ಕುರಿತು ತೀರ್ಮಾನ ನೆಹರು ಹಿಂತಿರುಗಿದ ಮೇಲೆ. ಹಾಗೆಯೇ ಒರಿಸ್ಸಾದ ಕುರಿತು ಹೇಳಿಕೆ? ನೆಹರು ಬಂದಮೇಲೆ. ಮುಂಬಯಿಯ ಕುರಿತು ಏನಾದರೂ ಕೊನೇ ನಿಮಿಷದ ಬದಲಾವಣೆ? ನೆಹರು ಬಂದಮೇಲೆ! ನಾಗಾ ಬಂಡುಗಾರರ ಕುರಿತು ವಿಶೇಷ ಕಾರ್ಯಕ್ರಮ? ನೆಹರೂ ಬಂದಮೇಲೆ! ಕಾಸರಗೋಡು ಕರ್ಣಾಟಕಕ್ಕೆ ದಕ್ಕೀತೆ? ನೆಹರು ಬಂದಮೇಲೆ. ಪುಂಗನೂರು ಕಾಂಗ್ರೆಸ್ ಬಿಕ್ಕಟ್ಟಿನ ಕುರಿತು ತೀರ್ಮಾನವೂ ನೆಹರು ಬಂದಮೇಲೆ. ಮಹರಾಷ್ಟ್ರದವರ ಮತ ಪ್ರದರ್ಶನ ಬಲವಾಗುವುದು ನೆಹರು ಬಂದಮೇಲೆ. ಹೀಗೆ ಎಷ್ಟೋ ಸಮಸ್ಯೆಗಳ ಕುರಿತು ತೀರ್ಮಾನವಾಗುವುದು ಪಂಡಿತ್‌ಜೀ ಹಿಂದಿರುಗಿದಮೇಲೆಯೇ ಎಂಬುದಾಗಿ ಬೇರೆ ಬೇರೆ ಪತ್ರಿಕೆಗಳ ವಿಶೇಷ ಸುದ್ದಿಗಾರರು ವಿಷಯವನ್ನು ಊಹಿಸಿ ಊಹಿಸಿ ಉಪ್ಪುಕಾರ ಬೆರೆಸಿ ಬರೆದಿದ್ದೂ ಬರೆದಿದ್ದೇ. ಅಂದಮೇಲೆ ಎಲ್ಲವೂ ನೆಹರು ಹಿಂದಿರುಗಿದ ಮೇಲೆ! ಆಯಾಯ ಸಮಸ್ಯೆಗಳಿಗೆ ಸಂಬಂಧಿಸಿದ ಮುತ್ಸದ್ದಿಗಳಿಗೆ ಊಟ ರುಚಿಸಿ, ನಿದ್ರೆ ಬರುವುದೂ ನೆಹರು ಹಿಂತಿರುಗಿದ ಮೇಲೆಯೇ ಎಂದು ಮುಂತಾಗಿ ತಲೆಯಲ್ಲಿ ಮಗುಚಿ ಹಾಕುತ್ತಾ ಪೇಟೆಗೆ ಹೋದೆ. ಸಧ್ಯ ನಮ್ಮೂರಿನ ದುರಗವ್ವನ ಜಾತ್ರೆ ನಡೆಯಬೇಕೋ ಬೇಡವೋ ಎಂಬುದರ ಕುರಿತು ಎದ್ದ ವಿವಾದವು ಬಗೆಹರಿಯುವುದೂ ನೆಹರೂ ಬಂದಮೇಲೆಯೋ ಏನೋ ಎಂದುಕೊಳ್ಳುತ್ತಿರುವಾಗ ಶಿಂಗ್ರಯ್ಯನ ಅಂಗಡಿ ಬಂತು. ನನಗೆ ನಾಲ್ಕು ಮೊಳೆ ಕೊಂಡುಕೊಳ್ಳಬೇಕಿತ್ತು. ನಮ್ಮೂರು ಕಮ್ಯುನಿಸ್ಟ್ ನಾಯಕ ಕೊಂಗಪ್ಪ, ಯಾರೋ ಸೊಗಸಾಗಿ ಬಿಡಿಸಿದ್ದ ಸ್ಟಾಲಿನ್ನನ ತೈಲಚಿತ್ರವನ್ನು ಕಿತ್ತು ಎಸೆದಿದ್ದ ಅವನ ಆಫೀಸಿನಲ್ಲಿ. ಬಣ್ಣಗಳ ಹೊಂದಾಣಿಕೆ ಇಷ್ಟು ಚೆಂದವಾಗಿದೆಯಲ್ಲ ಅಂತ ಅದನ್ನ ತಂದಿದ್ದೆ ನೇತು ಹಾಕುಕ್ಕೆ. ಅದಕ್ಕೆ ಮೊಳೆ ಬೇಕಿತ್ತು.

ಶಿಂಗ್ರಯ್ಯನ ಅಂಗಡಿಯೊಳಕ್ಕೆ ನುಗ್ಗಿ ಮೊಳೆ ಕೊಡಯ್ಯ ಎಂದೆ. ಅದಕ್ಕೆ ಶಿಂಗ್ರಯ್ಯ ಅನ್ನುತ್ತಾನೆ "ನಾಲ್ಕು ದಿನ ತಾಳಿ ಸ್ವಾಮಿ"—ಅಂತ! ಇದೇನು ಗುಂಭವಾಗಿ ಆಡುತ್ತಾನಲ್ಲ ಎಂದುಕೊಂಡು—" ಏನಯ್ಯ, ನಾಲ್ಕು ದಿನ ತಾಳಿದರೆ ?...." ಎಂದು ಕೇಳಿದೆ.

" ನಾಲ್ಕೇ ದಿನ ತಾಳಿ ಸಾರ್ ಅಷ್ಟರಲ್ಲಿ ಲಂಡನ್ನಿಗೆ ಹೋಗಿರೋ ನೆಹರೂಜೀ ಹಿಂದಿರುಗಿ ಬಿಡುತ್ತಾರೆ. ಅವರು ಬಂದಮೇಲೆ ದೇಶಮುಖರ ರಾಜೀನಾಮೆ ಖಂಡಿತ. ಆಗ ಮಾರ್ಕೆಟ್ ರೇಟುಗಳಲ್ಲಿಯೂ ಏನಾದರೂ ವ್ಯತ್ಯಾಸವಾಗಬಹುದು. ವ್ಯತ್ಯಾಸ ವೇನು, ದ್ವಿತೀಯ ಪಂಚವಾರ್ಷಿಕಯೋಜನೆಯಲ್ಲಿ ಬದಲಾವಣೆಗಳಾಗಬಹುದು. ಕಬ್ಬಿಣದ ಬೆಲೆ ಇಳಿಯಬಹುದು-ಅಂತಾನೆ ಈ ಪೇಪರಿನವನು"–ಎಂದು ಒಂದೇ ಸಮನೆ ಒದರಿ ಯಾವುದೋ ಕಚಡಾ ಪತ್ರಿಕೆ ಬಿಚ್ಚ ತೊಡಗಿದ ಶಿಂಗ್ರಯ್ಯ ನನಗೋ ಹಾಕಿಕೊಂಡಿದ್ದ ಷರ್ಟನ್ನೇ ಕಿತ್ತು ತಿಂದು ಬಿಡೋಣ ಎಂಬ ಹಾಗಾಯಿತು ಹೇಗೋ ಸುಧಾರಿಸಿಕೊಂಡು ಹೇಳಿದೆ–" ಅಲ್ಲವೋ ಶಿಂಗ್ರಯ್ಯ; ನಾಲ್ಕು ಮೊಳೆ ಕೊಡೋ ಎಂದರೆ ನೆಹರೂ ಬರಲಿ, ದೇಶಮುಖರು ರಾಜೀನಾಮೆ ಕೊಡಲಿ, ಎಂದೆಲ್ಲ ನಿನ್ನ ರಾಜಕೀಯ ಬಿಚ್ಚುತ್ತಿಯಲ್ಲ! ಸದ್ಯ ನನಗೆ ಬೇಕಾದ್ದು **ನಾಲ್ಕು** ಮಾತ್ರ- **ನಾಲ್ಕು ಮಣ ಮೊಳೆ** ಅಲ್ಲ. ತಿಳೀತೇನು ?"

ಅದಕ್ಕೆ ಪ್ರಾಣಿ ಹಲ್ಲು ಕಿರಿಯುತ್ತಾ " ಕ್ಷಮಿಸಿ ಸಾರ್. ಮೊಳೆ ಸ್ಟಾಕ್ ಖರ್ಚಾಗಿದೆ. ನಾಳಿದ್ದು ತರಿಸಿ ಕೊಡುತ್ತೇನೆ " ಎಂದು ಪ್ರಾಮಾಣಿಕವಾಗಿ ನುಡಿಯಿತು. " International Trading Company " ಎಂಬ ಅವನ ದೊಡ್ಡ ಬೋರ್ಡನ್ನು ಘಟ್ಟಿಯಾಗಿ ಓದಿ ಅಲ್ಲಿಂದ ಹೊರಬಿದ್ದೆ. ಅಷ್ಟರಲ್ಲಿ ಮಳೆ ಪ್ರಾರಂಭವಾಯಿತು. ನಾಲ್ಕು ಮೊಳೆಗಾಗಿ ಇನ್ನೂ ನಾನ್ನೂರು ಗಜ ಈ ಮಳೆಯಲ್ಲಿ ಯಾರು ಹೋಗುತ್ತಾರೆಂದು ಕೊಂಡು, ಶಿಂಗ್ರಯ್ಯ ಹೇಳಿದ ಹಾಗೆ " ನೆಹರೂ ಹಿಂದಿರುಗಲಿ " ಎಂದುಕೊಂಡು ನಾನೂ ಹಿಂದಿರುಗಿದೆ–ಮನೆಗೆ.

ಮನೆಗೆ ಬಂದ ಕೂಡಲೆ ನಮ್ಮಮ್ಮ " ಸೂಜಿ ತಂದೆಯೇನೋ ಮಗು ? ಎಂದು ಕೇಳಿದರು. ಅದು ನನಗೆ ಎಂದಿನಂತೆ ಮರೆತು ಹೋಗಿತ್ತು. " ಇಲ್ಲಮ್ಮ, ನೆಹರೂ ಬರಲಿ " ಎಂದು ಬಿಟ್ಟೆ.

" ಆ್ಞ........ " ಎಂದರು, ಅಮ್ಮ.

" ನೆಹರೂ ಲಂಡನ್ನಿಂದ ಹಿಂದಿರುಗಿ ಬರಲಮ್ಮ. ಆ ಮೇಲೆ ಸೂಜಿ ಕೊಂಡು ಕೊಳ್ಳೋಣ " ಎಂದು ನಕ್ಕೆ.

" ಅಗೋ ತೆಗೆದೆ ನೋಡು ನಿನ್ನ ಹುಚ್ಚು ಎಂದು ಅವರು ನಗುತ್ತಾ ಹೇಳಿದರು.

" ನೀನು ಹಾಗಂತೀಯ ಅಮ್ಮ. ಆದರೆ ಇಡೀ ದೇಶ "ನೆಹರೂ ಹಿಂದಿರುಗಿದ ಮೇಲೆ " ಎಂದುಕೊಂಡು ಹಾಯಾಗಿದೆ "–ಎಂದೆ.

—ರಾಮು

——o——

# ಜೈಲಾಗುವಾ !

(ಕುವೆಂಪು ಅವರಲ್ಲಿ ಕ್ಷಮಾಪಣೆಗಳನ್ನು ಕೇಳಿ)

---

ನಾ ನೀನು ಅವನೂನು ಜೈಲಾಗುವಾ !
ಜೈಲಿಂದ ಹೊರಬಂದು ಜನ ಮುಂದೆ ತುಂಬಿಟ್ಟು
ಹೊಸ ರಾಜಕೀಯದಲಿ ಮುಂದಾಗುವಾ ! !

ತೂಗ್ದಾಕುವಾ—ಹಣ್ಣಾಗುವಾ
ಮತಿ ಕೂಪ ಸಡಗರಕೆ ಎತ್ತಾಗುವ

ನಾ ನಿಮ್ಮ ಸುಖಕೆ ಸಖ
ನೀವೆನ್ನ ಸುಖಕೆ ಸಖ
ನಮ್ಮ ನಿಮ್ಮ ಸುಖವೆಲ್ಲಾ
ಸವಿವಖಿಲ ಪಕ್ಷ ಸುಖ
ಬಾ. ಬಾರ ಬಾರ ಸಖ
ನಾ ನೀನು ಅವನೂನು ಜೈಲಾಗುವಾ !

ಕಂಬಿ ತುಂಬಿದ ಕದದ
ಅಂತರ್ಯ ವಾಸದಲಿ ಮುಂದೆ ಕೈಲಾಸ
ರಾಗಿ ಬೀಸುತಲಿದ್ದು
ಭೋಗ ಜೀವನ ನಡೆಸಿ
ಬರುಪಟ್ಟೆಹಾಸ
ತಂತ್ರ ಮಂಟಪದಲ್ಲಿ
ಮಂತ್ರ ಮಾಟವು ನಡೆಯೆ
ಸಚಿವ ಸಂತ್ರಾಸ
ಪಕ್ಷ ಪಕ್ಷವ ಕಡೆಯೆ
ಲಕ್ಷದಾಸೆಯು ಮೂಡೆ
ಸೊಬಗಿನಾಶ್ವಾಸ
ಬಾ ಬಾರ ಬಾರ ಸಖ
ನಾ ನೀನು ಅವನೂನು ಜೈಲಾಗುವಾ
ಹೊಸ ರಾಜಕೀಯದಲಿ ಈಜಾಡುವಾ !

ರಾಮಚಂದ್ರನ ನೆನೆದ
ಮಹಾತ್ಮನಂತೆ
ಅವನ ರಕ್ಷೆಯು ಪಡೆದ
ನೆಹ್ರೂವಿನಂತೆ
ತಮ್ಮ ಹರಕೆಯನೊಸಗೆ ಮಂಚ ಮಾಡಿ
ಬಾಳ ಸಾಗಿಸಿದಂತೆ
ಜೈಲು ಪುಣ್ಯವ ಹಾಸಿ
ಅದರ ನೆನಪನೆ ಹೊದಿಸಿ
ಓಟು ಮಧುವನು ಸೂಸಿ
ಕಸಿಯುವೆನು ಅಧಿಕಾರ
ಅವರ ನೋಂಪಿಯ ಸುಧಾರಕ್ಷೆ ಬೇಡಿ
ಬಾ ಬಾರ ಬಾರ ಸಖ
ನಾ ನೀನು ಅವನೂನು ಜೈಲಾಗುವಾ
ಹೊಸ ರಾಜಕೀಯದಲಿ ಈಜಾಡುವಾ!

———o———

ನಮ್ಮ ಮುಖಂಡರೊಬ್ಬರು ಕಾರಾಗೃಹವಾಸ ಮಾಡದೆ ಇದ್ದ ದೇಶಭಕ್ತರಾರನ್ನೂ ಅಧಿಕಾರ ಸ್ಥಾನಗಳಿಗೆ ತೆಗೆದುಕೊಳ್ಳುವುದಿಲ್ಲ ಎಂದರಂತೆ.

ಆ ಕಾರಣದಿಂದ ಮುಂದೆ ಅಧಿಕಾರದ ಹೊಂಗನಸನ್ನು ಕಾಣಬಯಸುವವರು ಈಗಲೇ ಅದಕ್ಕೆ ಅರ್ಹತೆ ಪಡೆಯಲೋಸುಗ ಜೈಲುವಾಸವನ್ನು ಯಾವುದಾದರೂ ಕಾರಣದಿಂದ ಅನುಭವಿಸುವುದು ಮುಂದಕ್ಕೆ ಕ್ಷೇಮ.

ಹೀಗೆಂದುಕೊಂಡವರು ಈ ರೀತಿ ಕೆಣಕವಾಡಿದ್ದಾರಲ್ಲವೇ?

(—ಸಂ.)

# “ ಬಾ ಲೋ ೀ ಜಿ ”

‘ಸ್ಸಾರ್’ ಏನಪ್ಪಾ? ‘ಸ್ಸಾರ್’ ಏನಯ್ಯಾ? “ಏನೂ ಇಲ್ಲ ಸ್ಸಾರ್ ಹಸಿವಾಗ್ತಾ ಇದೆ ಮೂರಾಣೆಗೆ ಹೊಟ್ಟೆ ತುಂಬಿಕೋತೇನೆ.”

ಈ ರೀತಿ ಮೂರುಸಾರಿ ‘ಸ್ಸಾರ್’ ಹೇಳೋತನಕ ಬಾಲೋಜಿ ನನ್ನ ಹತ್ತಿರ ಊಟ ಕೇಳುತ್ತಲೇ ಇರಲಿಲ್ಲ. ಸುಮಾರು ನಲವತ್ತು ವಯಸ್ಸಿನವ. ಅರ್ಧಂಬರ್ಧ ಇಂಗ್ಲೀಷ್ ಕೂಡ ಮಾತನಾಡಬಲ್ಲ. ಒಣಗಿಕೊಂಡ ಕುಚೇಲನಂತಹ ದೇಹ. ಒಮ್ಮೊಮ್ಮೆ ವರ್ಷಕ್ಕೆರಡೋ ಮೂರೋ ಬಾರಿ ಕ್ಷೌರಮಾಡಿಸಿಕೊಳ್ಳುತ್ತಿದ್ದನಾದ್ದರಿಂದ, ಸಾಮಾನ್ಯವಾಗಿ ಅರೆ ಬಿಳಿ ಅರೆ ಕರಿ ಗಡ್ಡ ಮೀಶೆ ಇದ್ದೇ ಇರುತ್ತಿತ್ತು. ಹೆಂಡರಿಲ್ಲ. ಮಕ್ಕಳಿಲ್ಲ. ತಂದೆ ಇಲ್ಲ. ತಾಯಿ ಇಲ್ಲ. ಇದ್ದೊಬ್ಬ ಅಕ್ಕ ಸುಮಾರು ೨೦–೨೫ ವರ್ಷಗಳ ಕೆಳಗೆ ತೀರಿಕೊಂಡಮೇಲೆ ಒಂಟಿಯಾಗೇ ಸುಂಟರಗಾಳಿಯಂತೆ ಸುತ್ತಾಡಿಕೊಂಡಿದ್ದ. ಸಿಕ್ಕಿದ್ದನ್ನು ಸಿಕ್ಕಿದಾಗ ತಿನ್ನೋದು. ಭಿಕ್ಷೆ ಬೇಡೋದು ಹಸಿವಾದಾಗ, ಅವರು ಕೊಟ್ಟದ್ದು ತಿನ್ನೋದು. ಕೊಟ್ಟದ್ದು ಬೈಗಳಾದರೆ ಅದನ್ನೂ ನಗುತ್ತಾ ತಿಂದು ಹಿಂತಿರುಗುವುದು. ಯಾರಾದರೂ ಕೆಲಸ ಹೇಳಿದರೆ ಮಾಡೋದು, ಕೊಟ್ಟದ್ದು ತೆಗೆದುಕೊಳ್ಳೋದು ಇದೇ ರೀತಿ ಲಫಂಗು ಜೀವನ ನಡೆಸುತ್ತಿದ್ದ.

ನನಗೆ ಸುಮಾರು ಹತ್ತು ವರ್ಷಗಳಿಂದ ಇವನ ಪರಿಚಯ. ನಾನು ಆಗತಾನೇ ಪದವೀಧರನಾಗಿ ಕೆಲಸಕ್ಕಾಗಿ ಕಾಲು ಸವೆಸುತ್ತಿದ್ದೆ. ಅವನಂತೆಯೇ ನನ್ನ ಸಂಸಾರ ಕೂಡ. ಕೆಲಸವಿಲ್ಲದ ಕಾಸಿಲ್ಲದ ಪದವೀಧರನಿಗೆ ಈ ಲೋಕದಲ್ಲಿ ನೆಂಟರಿಷ್ಟರು ಎಲ್ಲಿ ಇರುತ್ತಾರೆ? ಹಾಗಾಗಿ ಬೇಜಾರಾದಾಗ ಊರ ಅಂಚಿನ ಬಸವನ ಕೊಳದ ಹತ್ತಿರ ಹೋಗಿ ಅಲ್ಲಿನ ಮೆಟ್ಟಲುಮೇಲೆ ಕುಳಿತು ಸುಮಾರು ಸಮಯ ಕಳೆಯುತ್ತಿದ್ದೆ. ಅಲ್ಲಿ ನಾನು ಒಮ್ಮೆ ಕುಳಿತುಕೊಂಡಿದ್ದಾಗ, ಬಾಲೋಜಿ ಬಂದ. ಬಂದವನು ಬಸವನ ಹತ್ತಿರ ಹೋಗಿ ಕುಳಿತುಕೊಂಡ. ಅದನ್ನೇ ಎರಡು ನಿಮಿಷ ದೃಷ್ಟಿಸಿ ನೋಡಿದ. ನಂತರ ಎದ್ದುಬಂದು ಸುತ್ತಲಿನ ಜಮೀನಿನಲ್ಲಿ ಅಲ್ಲಲ್ಲಿ ಹುಡುಕಿ ಹಲವಾರು ಬಣ್ಣದ ಕಾಡುಹೂವುಗಳನ್ನು, ಮಣ್ಣು ಕಲ್ಲುಗಳನ್ನು ಆರಿಸಿಕೊಂಡು ತಿರುಗಿ ಬಸವನ ಹತ್ತಿರ ಹೋಗಿ ಕುಳಿತ. ನಂತರ ಸಾವಧಾನವಾಗಿ ಆ ಕಲ್ಲಿನ ಬಸವಣ್ಣನಮೇಲೆ ಕಲ್ಲಿನಲ್ಲಿ, ಬಿಡಿಸಿದ್ದ ಹೂವಿನಮಾಲೆಗೆ, ತಾನು ಆರಿಸಿಕೊಂಡು ಬಂದಿದ್ದ ಕಾಡು ಹೂಗಳಿಂದ ಬಣ್ಣ ಬಣ್ಣದ ರಸವನ್ನು ಹಿಂಡಿ, ಆ ಬಣ್ಣದ ರಸವನ್ನೇ ಆ ಕಲ್ಲಿನ ಹೂಮಾಲೆಗೆ ಅಲಂಕಾರ ಮಾಡಿದ್ದ. ಅರ್ಧ ಗಂಟೆಯಕಾಲ ಈ ರೀತಿ ಶೃಂಗಾರ ಮಾಡಿರ

ಬಹುದು. ಕುತೂಹಲದಿಂದ ನಾನು ಬಸವನ ಹತ್ತಿರ ಹೋಗಿ ನೋಡಿದೆ. ದಿಟವಾಗಲೂ ವರ್ಣರಂಜಿತ ಬಸವಣ್ಣ ಎಷ್ಟು ಚೆನ್ನಾಗಿತ್ತಿರಿ ಅಂತ. ಕಲಾಸ್ಫೂರ್ತಿ ನಡೆಸಿದ ಕೈ ಅಂತಹ ಶೃಂಗಾರವನ್ನು ಮಾಡುವುದು ಖಂಡಿತಾ ಅಸಾಧ್ಯ ಎಂದೆನಿಸಿತು. "ಈ ಕಾಡುಹೂವಿನ ಬಣ್ಣದ ರಸದಿಂದ ಈ ರೀತಿ ನಿರ್ಜೀವಕಲ್ಲಿನ ಅಲಂಕಾರ ಮಾಡುವ ಸಜೀವ ವಿದ್ಯೆ ಎಲ್ಲಿ ಕಲಿತೆಯಯ್ಯಾ ! ಇದನ್ನು ಲೋಕಕ್ಕೆಲ್ಲಾ ಪ್ರದರ್ಶಿಸಬೇಕು" ಎಂದೆ. ವಯಸ್ಸಿನ ಹುಮ್ಮಸ್ಸಿನಲ್ಲಿ. ಆ ವಯಸ್ಸಿನಲ್ಲಿ ಹೊಟ್ಟೆ ತಾಳ ಹಾಕುತ್ತಿದ್ದರೂ, ಜುಟ್ಟು ಮಲ್ಲಿಗೆ ದಂಡೆಯನ್ನೇ ಬಯಸುತ್ತದೆ ಅಲ್ಲವೇ ?

ಅವ ಆ ಹೊತ್ತಿಗೆ ಕೊಳದಿಂದ, ಬೊಗಸೆಯಲ್ಲಿ ನೀರು ತಂದು ಬಸವಣ್ಣನ ಮೇಲೆ ಚುಮುಕಿಸಿ ತೊಳೆಯಲಾರಂಭಿಸಿದ. "ಬೇಡ ಕಣಯ್ಯಾ ! ಈ ಊರಿನವರಾದರೂ, ಕೆಲವರಾದರೂ ಬಂದು ನೋಡಿ ಸಂತೋಷಪಡಲಿ ಅಳಿಸಬೇಡ, ತೊಳೆಯಬೇಡ" ಎಂದು ಅಂಗಲಾಚಿ ಬೇಡಿಕೊಂಡೆ. ಕನಿಕರದಿಂದ ನನ್ನನ್ನು ನೋಡುತ್ತಾ ನನಗೆ ಅವನಂದ "ಈ ಸೊಬಗಿನ ಕಲೆ ನನ್ನ ಆನಂದಕ್ಕೆ—ಬಸವನ ಆನಂದಕ್ಕೇ ಹೊರತು ಮಿಕ್ಕ ಪಶುಗಳ ಟೀಕೆಗೆ ಆಹಾರವಲ್ಲ ಎಂದು. ಇದು ಹೇಳುತ್ತಿದ್ದಾಗಲೇ ಬಸವಣ್ಣನ ಮೇಲೆ ತಾ ಮಾಡಿದ್ದ ವರ್ಣ ಶೃಂಗಾರವನ್ನು ಅಳಿಸಿ ತೊಳೆಯುತ್ತಿದ್ದ. ಮುಗಿದಮೇಲೆ ಒಂದೂ ಮಾತಾಡದೆ ಹೊರಟೇಬಿಟ್ಟ. ಅವನ ಯೋಚನೆ ಮಾಡುತ್ತ ಇನ್ನೂ ಅರ್ಧ ಗಂಟೆ ಅಲ್ಲೇ ಕುಳಿತಿದ್ದೆ. ಎಲ ಎಲಾ ! ಎಂತಹ ಪ್ರತಿಭೆ. ಯಾವ ಕಾರಣದಿಂದ ಈ ರೀತಿ ಆಯಿತೋ? ಮನಸ್ಸಿನ ಜುಗುಪ್ಸೆಯೇ, ಬೇಸರವೇ, ಇದ್ದ ಪ್ರೌಢಿಮೆಯನ್ನು ಈ ರೀತಿ ಕಾಡು ಹೂವಿನಂತೆ ಊರಿನಲ್ಲಿದ್ದರೂ ಮರೆಸಿಡುತ್ತಿದ್ದಾನಲ್ಲ ಎಂದೆಲ್ಲಾ ಯೋಚನೆಗಳು. ಈತನ ವರ್ತನೆಗೆ ಕಾರಣ ನನಗೆ ಕಾಣಿಸಲೇ ಇಲ್ಲ. ಆ ಕಲ್ಲಿನ ಬಸವಣ್ಣನಿಗೆ ಎಷ್ಟು ಅರ್ಥವಾಗಿರಬಹುದೋ ಅಷ್ಟೇ ನನಗೂ ಆಗಿತ್ತು.

ಇದಾದನಂತರ ಯಾವುದೋ ಇಂಗ್ಲೀಷ್ ವಾಣಿಜ್ಯ ಸಂಸ್ಥೆಯಲ್ಲಿ ನನಗೆ ಕೆಲಸ ದೊರಕಿತು. ಸಂಬಳ ಸಾಕಷ್ಟು ದುಬಾರಿಯದು, ನನ್ನ ಜತೆಯಲ್ಲಿ ಪಾಸಾಗಿ, ಆದರೂ ಬೆಂಬಲವಿದ್ದವರು ಸರ್ಕಾರಿ ನೌಕರಿಯಲ್ಲಿ ಪ್ರೊಬೇಷನರ್‌ಗಿರಿ ಸಾಧಿಸುತ್ತಾರಲ್ಲಾ ಅಂತಹ ಸಂಬಳಕ್ಕಿಂತಲೂ ಇಮ್ಮಡಿಯಾದ ಸಂಬಳ ಅಂದ ಮೇಲೆ ಕೇಳಬೇಕೆ ನೆಂಟರು ದೊರೆತರು, ಮದುವೆಯಾಯಿತು. ಇಷ್ಟರು ಗಂಟು ಹಾಕಿಕೊಂಡರು. ಆಗ ಅರಿವಾಯ್ತು ನನಗೆ, ಊರೆಲ್ಲಾ ಹತ್ತಿರ ಸಂಬಂಧಿಗಳೇ ಎಂದು. ಕೆಲಸದ ಬಿರುಸೂ ವೇಗವಾಗಿತ್ತು. ಒಂದು ರೀತಿಯಾಗಿ ಯಾಂತ್ರಿಕ ಜೀವನ ಕಿರುಗುಟ್ಟದೆ, ಕುಂಯ್‌ಗುಟ್ಟದೆ ಸಾಗುತ್ತಿತ್ತು.

ಕಾಮನಹಬ್ಬದ ದಿನ ಬಾಲೋಜಿ ಮಧ್ಯಾಹ್ನ ೧ ಗಂಟೆಯ ಹೊತ್ತಿಗೆ ನಮ್ಮ ಅಂಗಡಿಯ ಹತ್ತಿರ ಬಂದ. ಅದೇ ಎರಡನೆಯ ಬಾರಿ ಅವನನ್ನು ಕಂಡಿದ್ದು. ಅವನಿಗೆ ನನ್ನ ಜ್ಞಾಪಕವಿಲ್ಲ. ಆದರೆ ನನಗೆ ಅವನ ಜ್ಞಾಪಕ ಮರೆಯುವಂತೇ ಇಲ್ಲ.

"ಏನಯ್ಯಾ ಬಾಲೋಜಿ" ಎಂದು ನಾನೇ ಶುರುಮಾಡಿದೆ "ಸ್ಸಾರ್" "ಸ್ಸಾರ್" "ಸ್ಸಾರ್ ಹೊಟ್ಟೆ ಹಸಿವಾಗ್ತಾ ಇದೆ ಒಂದು ಮೂರಾಣೆ ಊಟ ಕೊಟ್ಟರೆ ಆಯ್ತು" ಎಂದ, ರಾಗವಾಗಿ, ವಿರಾಗವಾಗಿ. ಪಕ್ಕದ ಹೋಟೆಲಿನಲ್ಲಿ ಊಟ ಹಾಕಿಸಿದೆ. ಧನ್ಯವಾದ ಮಾಡಲು ಆತ ತಿರುಗಿ ನನ್ನ ಹತ್ತಿರ ಬರಲೇ ಇಲ್ಲ.

ಇದಾದ ಮೇಲೆ ತಿಂಗಳಿಗೆ ಮೂರೋ ನಾಲ್ಕೋ ಬಾರಿ ಬರುತ್ತಿದ್ದ. ಯಾವಾಗ ಬಂದರೂ ಇದೇ ಪಲ್ಲವಿ. ಇದೇ ರಾಗ ಇದೇ ಹೊಟ್ಟೆಯ ತಾಳ. ನಾಲ್ಕಾರು ಬಾರಿ ಅವನ ಜೀವನ ಮಾರ್ಗಕ್ಕೆ ಏನಾದರೂ ಸಹಾಯ ಮಾಡೋಣ ಎಂದು ಕೊಂಡು, ಅವನ ಕಲಾ ಪ್ರತಿಭೆಗೆ ಬಹಿರಂಗ ಅವಕಾಶ ಕೊಡಬೇಕೆಂದುಕೊಂಡು ಮಾತನಾಡ ಲೆತ್ನಿಸಿದೆ. ಅವನು ಮೀನಿನಂತೆ ನುಣುಚಿಕೊಂಡು ಬಿಡುತ್ತಿದ್ದ. ಕಲೆ! ಕಲೆಯೆಲ್ಲಾ ನನ್ನ ಆನಂದಕ್ಕೆ, ಬಸವಣ್ಣನ ಪ್ರೀತಿಗೆ, ಎಂದು ಒಂದೆರಡು ಬಾರಿ ಮರಳಿ ಹೇಳುತ್ತಿದ್ದ ಅಲ್ಲಿಗೆ ನನ್ನ ಪ್ರಯತ್ನ ಮುಗಿಯುತ್ತಿತ್ತು. ಹಿಡಿದು ನಿಲ್ಲಿಸಿ ಯಾವುದಾದರೂ ನಿರ್ಧಾರಕ್ಕೆ ತರೋಣ ಎಂದು ನಾನು ಹವಣಿಸಿದರೆ, ಅದ್ಯಾವುದೋ ಅವ್ಯಕ್ತ ರೀತಿಯಲ್ಲಿ ನನ್ನ ಮುಖವನ್ನು ದೈನ್ಯತೆಯಿಂದ ನೋಡಿ, ನನ್ನ ಬಾಯನ್ನು ಕಟ್ಟಿ ಬಿಡುತ್ತಿದ್ದ. "ಎಲಾ! ನೀನು ಈ ಸಂಸಾರ ಸಮಾಜ ತೊಳಲಿನಲ್ಲಿ ಸಿಕ್ಕಿಹಾಕಿ ಕೊಂಡು ನರಳುವುದು ನಿನ್ನ ಹಣೇ ಬರಹ. ನಾನು ಸ್ವಚ್ಛಂದನಾಗಿದ್ದೇನೆ, ನನಗೇಕೆ ಕತ್ತಿನ ಕೊರಡು ಕಟ್ಟಿ ಒದ್ದಾಡುವಂತೆ ಮಾಡುತ್ತೀ" ಎಂದೆನ್ನುವ ಇಂಗಿತ ಮಸುಕಾಗಿ ಕಾಣಿಸುತ್ತಿತ್ತು.

ಇದೇ ರೀತಿ ಹತ್ತು ವರ್ಷಗಳು ಕಳೆದುವು. ನಾನು ಮೋಟಾರಿಟ್ಟು ವರಮಾನ ತೆರಿಗೆ ಕಚೇರಿಗೆ ಹೋಗಿ ಬರುವ ಮಟ್ಟಕ್ಕೇರಿದ್ದೆ. ನಾನು ಬೊಜ್ಜು ಬೆಳೆಸಿದ್ದೆ. ಅವ ಮೊದಲಿನಂತೆಯೇ ಇದ್ದ. ನನಗೆ ೬೦ ವಯಸ್ಸಿರಬಹುದು ಎಂದು ಜನರೆಂದರೆ, ಅವನಿಗೆ ಇಪ್ಪತ್ತೇ ಇರಬೇಕು ಎಂದು ಜನರನ್ನುತ್ತಿದ್ದರು. ಅವನನ್ನು ನೋಡಿದಾ ಗಲೆಲ್ಲಾ ನನಗೆ ಒಂದು ರೀತಿಯ ಅಸೂಯೆ ಹುಟ್ಟುತ್ತಲೇ ಇತ್ತು.

* * *

ಈ ಸಾರಿ ದಸರಾದಲ್ಲಿ ಮೈಸೂರು ಸಂತೆಯಾಗಿತ್ತು. ಕುಡಿಯಲು ನೀರು ಕೂಡ ಸಿಗುವುದು ಕಷ್ಟವಾಗಿತ್ತು. ಇರುವೆಗೂಡು ಕಟ್ಟಿದ ಹಾಗೆ ಜನ ಸೇರಿದ್ದರು ಎಂದೆಲ್ಲಾ ಸುದ್ದಿಗಳನ್ನು ಓದುತ್ತಿದ್ದೆವು. ವಿಜಯದಶಮಿಯ ಮಾರನೆಯ ದಿನದಿಂದ ಮೂರು ದಿನಗಳು ಬೆಂಗಳೂರಿನಲ್ಲಿ ಮರಿ ದಸರಾ ಜಾತ್ರೆ ನಡೆದಂತೇ ಕಾಣುತ್ತಿತ್ತು. ಜನ ಸಂಚಾರ, ಮೋಟಾರೋಡಾಟ ಹಾಗಿತ್ತು. ನನ್ನ ಅಂಗಡಿಯ ಹತ್ತಿರಕ್ಕೆ ದಸರಾ ಇನಾಂ ಕೇಳಲು ಕಂಡವರೂ ಕಾಣದವರೂ, ಬಂದವರೂ, ತಿರುಗಿತಿರುಗಿ ಬಂದವರೂ ಎಲ್ಲರೂ ಮೇಲೆ ಮೇಲೆ ಬಂದು ಪೀಡಿಸುವ ದಿನಗಳವು.

ಮಧ್ಯಾಹ್ನ ೧ ಗಂಟೆಯ ಸಮಯ. ಎದುರಿಗೆ ಬಾಲೋಜಿ ಬಂದು ನಿಂತ. ರೂಢಿಯ ಬಲದಿಂದ 'ದಸರಾ ಇನಾಮೇನಯ್ಯಾ!' ಎಂದೆ. "ಸ್ಸಾರ್ ಸ್ಸಾರ್" ಹೌದು ಸಾರ್ ಎಂದ. ನಾನು ಷರಾಯಿ ಜೇಬಿನಿಂದ ಕೈತೆಗೆದೆ. ಅಂಗಿಯ ಜೇಬಿನಲ್ಲಿದ್ದ ಹಣ ತೆಗೆಯೋಣ ಎಂದು. ಆದರೆ ಷರಾಯಿ ಜೇಬಿನಿಂದ ನನ್ನ ಕೈ ಹೊರಬಿದ್ದ ಕೂಡಲೇ ಬಾಳಾಜಿ ಹತ್ತು ರೂಪಾಯಿನ ನೋಟನ್ನು ನನ್ನ ಕೈಲಿಟ್ಟ! ನನಗೆ ಉಸಿರೇ ನಿಂತು ಹೋದಂತಾಯ್ತು ಎಲಾ! ಇವನ! ದಸರಾ ಇನಾಂ ಏನಯ್ಯಾ ಎಂದರೆ, ನಾನೇ ಇವನನ್ನು ಇನಾಂ ಕೇಳಿದೆನೆಂದು ಭಾವಿಸಿಕೊಂಡನೇನೋ. ಇವನಿಗೆಲ್ಲಿ ಬಂತು ಈ ಹತ್ತು ರೂಪಾಯಿ. ಎಂದೆಲ್ಲಾ ಯೋಚನೆಗಳು ಘುಂಯಿ್ ಗುಟ್ಟಿದವು

"ಬಾಲೋಜಿ ನೀನು ಈಗ ಎಲ್ಲಾದರೂ ಕೆಲಸಕ್ಕೆ ಸೇರಿಕೊಂಡೆಯಾ ? ಏನು ಕೆಲಸ. ಈ ರೂಪಾಯಿ ನನಗೇಕೆ ಕೊಟ್ಟೆ. ನಿನ್ನ ಪರವಾಗಿ ಇಟ್ಟು ಕೊಂಡಿರಲಿ ಎಂದೇ ?" ಎಂದೆಲ್ಲಾ ಕೇಳಿದೆ.

ಬಾಲೋಜಿ ಆಗ ಹೇಳಿದ. "ಸ್ಸಾರ್ ನಾನು ಮಹೇಂದ್ರ ಭವನದ ಮುಂದೆ ರಸ್ತೆಯಂಚಿನಲ್ಲಿ ನಿಂತಿದ್ದೆ. ಒಂದು ಮೋಟಾರು ಗಾಡಿ ಬಂತು ಅದರಿಂದ ಒಬ್ಬ ಧಡಿಯ ಇಳಿದು, ಮಹೇಂದ್ರಭವನದ ಒಳಕ್ಕೆ ಹೋಗಲೆತ್ನಿಸಿದ ಅಲ್ಲಿ ಗಲಾಟೆ ಹೆಚ್ಚಾಗಿತ್ತು. ಹಿಂತಿರುಗಿ ಬಂದ. ಕಾರಿನ ತುಂಬ ಮಕ್ಕಳು ಮರಿ ಹೆಂಗಸರು ತುಂಬಿದ್ದರು. ಮೈಸೂರಿನಿಂದ ಬಂದ ಕಳೆ ಇತ್ತು. ಆ ಧಡಿಯನಿಗೆ ಏನು ತೋಚಿತೋ ಏನೋ ನನ್ನ ಹತ್ತಿರ ಬಂದು, "ಹೋಟೆಲಲ್ಲಿ ನಮಗೆ ಒಂದು ಕೊಠಡಿ ಗೊತ್ತು ಮಾಡು, ಇಪ್ಪತ್ತಾದರೂ ಪರವಾಗಿಲ್ಲ" ಎಂದು ಎರಡು ಹತ್ತು ರೂಪಾಯಿ ನೋಟು ಗಳನ್ನು ನನ್ನ ಕೈಲಿಟ್ಟ ತಮಿಳಿನಲ್ಲಿ ಅವನು ಮಾತಾಡಿದರೂ, ನನಗೆ ತಿಳಿಯುವಂತಹ ತಮಿಳದು. ಅಯ್ಯೋ! ಪಾಪ! ಎಂದುಕೊಂಡು ನಾನು ಹೋಟೆಲಿನೊಳಕ್ಕೆ ಹೋದೆ ಅಲ್ಲಿದ್ದ ಗಲಾಟೆಯಲ್ಲಿ ಯಾರೋ ಸೇವಕ ನನ್ನ ಬಟ್ಟೆಯನ್ನು ನೋಡಿಯೋ ಗಡ್ಡವನ್ನು ನೋಡಿಯೋ ದರದರ ಹಿಡಿದುಕೊಂಡು ಅಡಿಗೆ ಮನೆ ಕಡೆಗ ಎಳೆದು ಕೊಂಡು ಹೋಗಿ ಆ ಕಡೆ ಬಾಗಿಲಿನಿಂದ ಹೊರಕ್ಕೆ ದಬ್ಬಿದ, ತಿರುಗಿ ಇಲ್ಲಿಗೆ ಭಿಕ್ಷಕ್ಕೆ ಬಂದರೆ ಕೈ ಮುರಿದು ಕಾಲಿಗೆ ಕೊಡುತ್ತೇನೆ ಎಂದೂ ಬೆದರಿಸಿದ.

ನಾನು ಆ ಕಡೆಯಿಂದ ಸುತ್ತಿ, ಈ ಕಡೆಗೆ ಬಂದರೆ ಆ ಧಡಿಯನೂ ಇಲ್ಲ ಧಡಿಯನ ಕಾರೂ ಇಲ್ಲ. ಬಸವಣ್ಣನ ಪ್ರೀತಿ ಎಂದು ಈ ಕಡೆ ಬರುತ್ತಿದ್ದೆ. ಎದುರಿನಲ್ಲಿ ಚಿಂದಿ ಉಟ್ಟ ಎಳೆ ಮಗುವನ್ನು ಹೊತ್ತ ಬಾಣಂತಿಯೊಬ್ಬಳು ನನ್ನನ್ನು ಭಿಕ್ಷೆ ಕೇಳಿ ದಳು. ಒಂದು ಹತ್ತು ರೂಪಾಯಿ ನೋಟನ್ನು ಅವಳ ಕೈಲಿಟ್ಟೆ. ಅವಳು ಒಂದು ತರಹಾ,ನನ್ನನ್ನು ನೋಡಿದಳು ಹೆದರಿಕೊಂಡು ಇಲ್ಲಿಗೆ ಓಡಿ ಬಂದು ಬಿಟ್ಟೆ. ಬಸವ ಣ್ಣನ ಮರ್ಜಿ ! ನಾನು ಎದುರಿಗೆ ಕಂಡಾಗ ನೀವೇ ದಸರಾ ಇನಾಮೇನಯಾ,

ಎಂದಿರಿ ದಸರಾ ಇನಾಂ ನಿಮಗೆ ನಾನು ಕೊಡುವಂತೆ ಬಸವಣ್ಣ ಆಟ ಕಟ್ಟಿದ್ದಾನೆ ಎಂದು ಆಗ ತೋಚಿತು. ಶಿವನಿಚ್ಚೆ ಅಲ್ಲವೇ ಸ್ವಾರ್ ಎಂದ.

ಅವನು ಹೇಳಿದ್ದನ್ನೆಲ್ಲಾ ಮನನ ಮಾಡುತ್ತಿದ್ದೆ ಬೆಪ್ಪು ಬೆರಗಾಗಿ ನಿಂತಿದ್ದೆ "ಸ್ವಾರ್" "ಸ್ವಾರ್"

ಏನು ಬಾಲೋಜಿ.

"ಸ್ವಾರ್ ಹಸಿವಾಗ್ತಾ ಇದೆ ಮೂರಾಣೆಗೆ ಹೊಟ್ಟೆ ತುಂಬಿಕೋತೇನೆ" 'ಆ್ಞ' ಎಂದು ಚಕಿತಗೊಂಡು ಪಕ್ಕದ ಹೋಟೆಲಿನಲ್ಲಿ ಯಥಾಪ್ರಕಾರ ಊಟ ಹಾಕಿಸಿದೆ.

ಆ ಹತ್ತು ರೂಪಾಯಿನ ನೋಟನ್ನು ನನ್ನ ಮನಿ ಪರ್ಸಿನಲ್ಲಿ ಮುಡುಪಾಗಿಟ್ಟು ಕೊಂಡಿದ್ದೇನೆ.

— ಬಚ್ಚ.




ಮಾತ ಗಾಳೀ ಸವಾರಿ ಮುಗಿಸಿಕೊಂಡು ಬರುತ್ತಿರುವುದು.

# ಭೀತಿಯ ಕಥೆಗಳು

**ಅರಿತವರಿಗೆ**

---

ಕೋಮಸುಂದರ ಬಲು ಚೆಲುವಿನ ಇಸಮು. ಬಲು ಭಾರಿ ಗಂಡು. ಕೆಚ್ಚಿದೆಯ ಆಸಾಮಿ. ಆದರೂ ಅವನ ತಲೆಯ ಮೇಲೆ ಕಾಣಿಸಿದ ಸುಂದರ ಕರಿಯ ಗುಂಗುರು ಕೂದಲು, ಮೋಸದ ಟೋಫನ್, ಅಷ್ಟೇ!

ಅವನ ಕೋಳಲತೆ ಸಾಮಾನ್ಯರ ತೊಡೆಯುಳತೆಯಷ್ಟಿತ್ತು, ದಿಟ! ಅವನ ಧೈರ್ಯ ದೆವ್ವಗಳನ್ನು ಹೆದರಿಸುತ್ತಿತ್ತು, ನಿಜ! ಆದರೆ ಅವನ ತಲೆ, ಬಟ್ಟೆ ನುಣುಪಿನ ಬೋಳು.

ಮಗುವಿನ ಮನಸ್ಸು, ಛಾಯ ಚಿತ್ರದಲ್ಲಿ ಅಂದವಾಗಿರಲೆಂದು ಈ ಟೋಫನ್ ಧರಿಸುತ್ತಿದ್ದ, ಕೋಮಸುಂದರ.

* * *

ದೆವ್ವದ ಮನೆಯಲ್ಲಿ ಅಮಾವಾಸ್ಯೆ ರಾತ್ರಿ ಒಬ್ಬನೇ ಮಲಗುತ್ತೇನೆಂದು ಪಣ ತೊಟ್ಟಿದ್ದ ಕೋಮಸುಂದರ.

ಮಲಗುವಾಗ ಟೋಫನ್ನನ್ನು ದಿಂಬಿನಂಚಿನಲ್ಲಿದ್ದ ಗೂಟಕ್ಕೆ ತಗಲು ಹಾಕಿದ್ದ. ಆ ರಾತ್ರಿ, ನಿಶಿ ೨ ಗಂಟೆಗೆ ತಾನು ಮಲಗಿದ್ದೆಡೆಯಿಂದ ಪ್ರಕೃತಿ ಆಜ್ಞಾವಾಹಿನಿಯಾಗಿ ತನ್ನ ಕೊಠಡಿಯಿಂದ ಹೊರಬಿದ್ದಿದ್ದ.

ಹಿಂತಿರುಗುವಾಗ ಕೊಠಡಿಯ ಬಾಗಿಲು ಬೀಸಿದ ಗಾಳಿಯ ರಭಸಕ್ಕೆ, ಮಳೆಯ ದೆಸೆಯಿಂದ, ಗಟ್ಟಿಯಾಗಿ ಜಡಿದು ಕೊಂಡು ಬಿಟ್ಟಿತ್ತು.

ಯತ್ನವಿಲ್ಲದೆ ಕೋಮಸುಂದರ ಹಜಾರದಲ್ಲಿನ ರತ್ನಗಂಬಳಿಯ ಮೇಲೇ ಮಲಗಿ ಗಾಢ, ಮಗು, ನಿದ್ರೆ ಮಾಡಿದ.

* * *

ಬೆಳಗ್ಗೆ ಆರಕ್ಕೆ ಪಣಗಾರರು ದೆವ್ವದ ಮನೆಯ ಹೊರಗೆ ಸಿದ್ಧವಾಗಿದ್ದರು. ಸಂತಸದ ಗೊರಕೆ ಕೇಳಿಸಿತು ಎಂಟಕ್ಕೆ ಗೊರಕೆ ನಿಂತಿತು. ಕೋಮಸುಂದರ ಎದ್ದು,

ಕಣ್ಣುಜ್ಜಿಕೊಂಡು ಮನೆಯ ಹೊರ ಬಾಗಿಲನ್ನು ತೆಗೆದು ಬಂದು ನಿಂತು ಬಟ್ಟೆ ತಲೆಯನ್ನು ನೇವರಿಸಿಕೊಂಡು ಆಕಳಿಸಿದ.

ಪಣ ಹೋದರೂ ನೀನಿದೀಯೆಲ್ಲಾ ಎಂದು ಹರ್ಷಗೊಂಡರು ಪಣಗಾರರು. ನಂತರ ದೆವ್ವದ ಮನೆ ಒಳ ಹೊಕ್ಕು ಕೊಠಡಿಯ ಬಾಗಿಲನ್ನು ಒದ್ದರು. ಕೋಮ ಸುಂದರನ ಕಪ್ಪು ಕಪ್ಪು ಟೋಫನ್, ಬೆಳ್ಳ ಬೆಳ್ಳಗಾಗಿತ್ತು!

ಆಗ ಪಣಗಾರರು ಗೆದ್ದೆವೆಂದರು.

---



"ಈ ನಾಲ್ಕು ತಿಂಗಳಿಂದ ಪುರಸೊತ್ತಿಲ್ಲದಷ್ಟು ವ್ಯಾಪಾರ ನಡೀತಿದೆ, ಸಾರ್! ನವರಾಜ್ಯದ ಗಲಾಟೆಯಲ್ಲಿ ಅವರಿವರ ತಲೆ ಗಲ್ಲ ಬೋಳಿಸುವುದರಲ್ಲಿ, ನನ್ನ ಗಲ್ಲಕ್ಕೆ ವೇಳೆ ಬಂದಿಲ್ಲಾ ಸಾರ್!"

# ನಂಬಬಾರದು ಈ ಹೆಂಗಸರನ್ನು

"ನಾಗವೇಣಿ! ನಗರಿಗೆ ನಾಂ ಪೋಗಿ ಬರುವೆನೇ" ಎಂದ ಪಟೇಲ್ ತಿಮ್ಮಯ್ಯ ತನ್ನ ಹೆಂಡತಿಗೆ. ಆಗಲಿ ಅಂದ್ರೆ ಅಂದಳು ನಾಗವೇಣಿ, ಅವರ ಹೋಲ್ಡಾನ ಮೆಟ್ಟಿಲ ಮೇಲಿಟ್ಟು. ಪಟೇಲ್ ತಿಮ್ಮಯ್ಯ ೭ ಗಂಟೆಯ ಷಹರಿನ ಬಸ್ ಹತ್ತಿ ಹೊರಟು ಹೋದ, ಶನಿವಾರ ಬೆಳಗ್ಗೆ.

ಶುಕ್ರವಾರ ಮಧ್ಯಾಹ್ನದ ಮೇಲೆ ತಿಮ್ಮಯ್ಯ ಏನೇನೋ ಕೆಲಸದ ವಿಚಾರ ವನ್ನೆಲ್ಲಾ ನಾಗವೇಣಿಗೆ ಹೇಳಿದ್ದ. ಆದಕ್ಕಾಗಿ ಶನಿವಾರ ತುರ್ತಾಗಿ ಷಹರಿಗೆ ಹೋಗಬೇಕೆಂದೂ, ಅಲ್ಲಿ ತುಂಬಾ ಕೆಲಸ, ವ್ಯಾಪಾರ ಇರುವುದರಿಂದ ತಾನೊಬ್ಬನೇ ಹೋಗುವನೆಂದೂ, ಭಾನುವಾರ ಸಾಯಂಕಾಲದ ಬಸ್ಸಿನಲ್ಲಿ ಹಿಂತಿರುಗುವನೆಂದೂ ನಯವಾಗಿ ಹೇಳಿದ್ದ. ಷಹರಿನಿಂದ ಏನು ತಂದುಕೊಡಲಿ ಎಂದು ಪ್ರೀತಿಯಾಗಿಯೂ ಕೇಳಿದ್ದ. ಕಡೆಗೆ ಗಲ್ಲವನ್ನೂ ಒಮ್ಮೆ ಚಿವುಟಿದ್ದ. ಒಂದು ಧರ್ಮಾವರದ ಟಿಸ್ಸೂ ಸೀರೆ ತನ್ನಿ ಅಂದ್ರೆ ಅಂದಿದ್ದಳು ಅಷ್ಟೇ ನಯವಾಗಿ ನಾಗವೇಣಿ.

ಆದರೆ ಬುಧುವಾರ ಮಾಸ್ತರ್ ಶಿಂಗಪ್ಪನ ಹೆಂಡತಿ ತರಕಾರಿ ಅಂಗಡಿ ಹತ್ತಿರ ಹೇಳಿದ್ದಳು, ಅವರ ಯಜಮಾನರು ಶನಿವಾರ ಷಹರಿಗೆ ನಾಟಕ ನೋಡುಕ್ಕೆ ಹೋಗ್ತಾರೆ ಅಂತ. ಗುರುವಾರ ಬೆಳಗ್ಗೆ ಮನೆ ಕೆಲಸದವಳು ಹೇಳಿದ್ದಳು, ಶಾನುಭೋಗ ಶೀನಣ್ಣನವರು ಶನಿವಾರ ಷಹರಿಗೆ ನಾಟಕ ನೋಡಲು ಹೋಗುತ್ತಾರೆ ಅಂತ. ಗುರುವಾರ ಸಂಜೆ ಹಾಡಿನ ಮಾಸ್ತರು, ಅಮ್ಮಾ ನಾನು ಶನಿವಾರ ಷಹರಿಗೆ ಹೋಗುತ್ತೇನೆ ಎಂದು ಹೇಳಿದ್ದರು.

ಅಂದಮೇಲೆ ಇವರೆಲ್ಲರೂ ಶನಿವಾರ ಷಹರಿನ ಹೋಟಲಲ್ಲಿ ಚೆನ್ನಾಗಿ ತಿಂದು ಮಧ್ಯಾಹ್ನವೆಲ್ಲಾ ಇಸ್ಪೀಟ್ ಆಡಿ ರಾತ್ರಿ ನಾಟಕ ನೋಡಿಕೊಂಡು ಭಾನುವಾರ ಷಹರೆಲ್ಲಾ ಸುತ್ತಿ ಸುಖಪಟ್ಟು ಸುಸ್ತಾಗಿ ಸಂಜೆಗೆ ಹಳ್ಳಿಗೆ ಬರುತ್ತಾರೆ ಎಂದು ನಾಗವೇಣಿಗೆ ಗುರುವಾರವೇ ಗೊತ್ತಾಗಿತ್ತು. ಅದಕ್ಕೇ ಶುಕ್ರವಾರ ಬೆಳಗ್ಗೇನೆ ಆಕೆ ಸಾಹುಕಾರ್ ರಾಮೇಗೌಡನ ಹಿರಿಯ ಸೊಸೆಯನ್ನು ಕಂಡಿದ್ದಳು. ಅವಳಿಗೆ ಈ ಗಂಡಸರ ಏರ್ಪಾಡು ಹೇಳಿದ್ದಳು. ಆಕೆಯನ್ನು ಆಕೆಯ ಅತ್ತೆಯನ್ನೂ ಕರೆದುಕೊಂಡು ನಾಗವೇಣಿಯೂ ಷಹರಿಗೆ ಶನಿವಾರ ಸಂಜೆ ಹೋಗಿ ನಾಟಕ ನೋಡಿಕೊಂಡು, ಆ ರಾತ್ರಿಯೇ ಮನೆಗೆ ಬರಬೇಕೆಂದು ಅವರೆಲ್ಲರೂ ಸನ್ನಾಹ ಮಾಡಿ

ಕೊಂಡಿದ್ದರು. ಶುಕ್ರವಾರ ಬೆಳಿಗ್ಗೇನೇ ಹಿರಿಯ ಸೊಸೆಯು ಪಹರಿಗೆ ಆಳನ್ನು ಕಳಿಸಿ, ತನ್ನ ತಮ್ಮ ಅಸಿಸ್ಟೆಂಟ್ ಪೋಲೀಸ್ ಸೂಪರಿಂಟೆಂಡೆಂಟ್ ರಂಗೇಗೌಡರು ತಮ್ಮ ಮೋಟಾರನ್ನು ಶನಿವಾರ ಮಧ್ಯಾಹ್ನ ಹಳ್ಳಿಗೆ ಕಳಿಸಬೇಕೆಂದೂ, ಆ ಸಂಜೆ ರಂಗೇಗೌಡರ ಮನೆಯಲ್ಲೇ ಇವರಿಗೆಲ್ಲಾ ಔತಣವಾಗಬೇಕೆಂದೂ, ರಂಗೇಗೌಡನೂ ತನ್ನ ಸಂಸಾರ ದೊಂದಿಗೆ ನಾಟಕಕ್ಕೆ ಇವರೊಡನೆ ಬರಬೇಕೆಂದೂ, ಪತ್ರ ಬರೆದು ಕಳಿಸಿದ್ದಳು.

ಅದಕ್ಕೇ! ಈ ಸೋಗುಹಾಕಿಕೊಂಡು ಪಟೇಲ್ ತಿಮ್ಮಯ್ಯ ತನ್ನ ಕೆಲಸದ ನಿಮಿತ್ತವನ್ನು ಹೇಳಿದಾಗ ನಾಗವೇಣಿ ಹ್ಞಾ ಅಂದ್ರೆ ಅಂತ ಮಿಕಿಮಿಕಿ ಬೆರಗು ಬೆರಗಾಗಿ ನೋಡುತ್ತಾ, ಸೀರೆಯ ಬೇಡಿಕೆಯನ್ನು ಮುಂದಿಟ್ಟಿದ್ದಳು. ಶನಿವಾರ ಮಧ್ಯಾಹ್ನ ಮೂರಕ್ಕೆ ಹಿರಿಯ ಸೊಸೆ, ಅತ್ತೆ, ಇಬ್ಬರೂ ಶೃಂಗಾರ ಮಾಡಿಕೊಂಡು, ಅ॥ಸೂ॥ ರಂಗೇಗೌಡರ ಮೋಟಾರಿನಲ್ಲಿ ನಾಗವೇಣಿ ಮನೆಗೆ ಬಂದರು. ಹಸನಾದ ಹಸುವಿನ ತುಪ್ಪದ ಘಮಘಮದ ರವೆಉಪ್ಪಿಟ್ಟನ್ನು ತಿಂದು, ಕಾಫಿ ಕುಡಿದು, ಎಲಡಿಕೆ ಮೆಲ್ಲುತ್ತಾ, ನಾಗವೇಣಿಯ ಜತೆಗೆ ಮೂಳೂವರೆ ಗಂಟೆಗೆ ಹೊರಟರು ಪಹರಿಗೆ. ೫ಕ್ಕೆ ರಂಗೇಗೌಡರ ಮನೆ ಸೇರಿದರು. ರಂಗೇಗೌಡರ ೬ ವರ್ಷದ ಅನೂರಾಧೆ ಒಂದು ವರ್ಷದಿಂದ ಕಲಿತ ನಾಟ್ಯದ ಪ್ರದರ್ಶನವನ್ನು ಮಾಡಿದಳು. ಎಂಟಕ್ಕೆ ಔತಣದ ಊಟ. ೯ಕ್ಕೆ ಮರಳಿ ಶೃಂಗಾರ. ೯-೩೦ಕ್ಕೆ ರಂಗೇಗೌಡರ ಅಧಿಕಾರ ನೇತೃತ್ವದಲ್ಲಿ ಎಲ್ಲರೂ ನಾಟಕಕ್ಕೆ ಹೋದರು. ಅವರಿಗಾಗಿ ಕಾದಿರಿಸಿದ್ದ ಮುಂಗಡೆಯ ಸೋಫಾದಲ್ಲಿ ಎಲ್ಲರೂ ಕುಳಿತರು.

ಹಿಂದಾಗಡೆ(ಇಂತಹ ಕನ್ನಡವನ್ನು ಇನ್ನುಮೇಲೆ ಕಲಿಯಬೇಕು!) ತಿಮ್ಮಯ್ಯ ಅವನ ಸ್ನೇಹಿತರು, ೧ ರೂಪಾಯಿನ ಕ್ಲಾಸಿನಲ್ಲಿ ಅರ್ಧ ಗಂಟೆಗೆ ಮುಂಚೆಯೇ ಬಂದು ಕೂತಿದ್ದಾರೆ. ಶಖೆ. ಸುಸ್ತು. ಹೊರವಾಗಿ ತಿಂದ ಅಮಲು, ಹಲಗೆಯ ಕುರ್ಚಿ, ಸ್ಥೂಲಶರೀರ. ನಿದ್ರೆಯ ಝೋಂಪು ಝಾಡಿಸುತ್ತ ಬಂದಿದೆ. 'ಲೋ' ಅಂದ ತಿಮ್ಮಯ್ಯ. 'ಆ್ಞ' ಅಂದ ಮಾಸ್ತರು. 'ಓ' ಅಂದ ಶಾನುಭೋಗ. ನಂತರ ಎಚ್ಚೆತ್ತು "ಹೋ" ಎಂದ ಶಾನುಭೋಗ. ಮೂವರೂ ಕಣ್ತೆರೆದು ನೋಡಿದರು. ನಾಗವೇಣಿ ಸೋಫಾದಲ್ಲಿ ರಾಣಿಯಂತೆ ಹಗೂರಾಗಿ ನಡೆದು ಬಂದು, ಠೀವಿಯಿಂದ ಮುಂದಿನ ಸೋಫಾದಲ್ಲಿ ಕುಳಿತಿದ್ದಾಳೆ. ಅದನ್ನು ಕಂಡೇ ತಿಮ್ಮಯ್ಯ ಬೆಚ್ಚಿ ಎದ್ದು 'ಲೋ' ಎಂದಿದ್ದು. ಮಿಕ್ಕವರು ಮಾರ್ದನಿ ಕೊಟ್ಟಿದ್ದು.

"ಲೋ! ಅವಳು ನನ್ನ ನಾಗವೇಣಿಯಲ್ಲವೇನೋ?"

"ಇಲ್ಲ ಕಣೋ! ನಿನ್ನ ನಾಗವೇಣಿಯಾದರೂ ಯಾಕಾದೀತು? ಅವಳು ಹಳ್ಳಿಯಿಂದ ಇಲ್ಲಿಗೆ ಹೇಗೆ ಬರುತ್ತಾಳೋ ಈಗ, ಯಾವ ಬಸ್ಸೂ ಇಲ್ಲವಲ್ಲೋ!" ಎಂದ ಮಾಸ್ತರ ಶಿಂಗಪ್ಪ.

"ಜಡೆ ನೋಡಿ, ಬೆನ್ನು ನೋಡಿ, ನನ್ನ ಹೆಂಡತಿ ಅಂತ ಕೂತಿರುವ ಹೆಂಗಸನ್ನು ಗುರ್ತು ಹಿಡಿಯಬಲ್ಲ ಗಂಡಸು ತಿಮ್ಮಯ್ಯ ಒಬ್ಬನೇ ಕಣೋ" ಎಂದ ಸ್ವಲ್ಪ ವಿಳಂಬ ವಾಗಿ ಎಚ್ಚೆತ್ತ ಶ್ಯಾನುಭೋಗ, ಕುಹಕದಿಂದ.

ಆ ವೇಳೆಗೆ ಪರದೆ ಎದ್ದಿತು ರಂಗಮಂಟಪದ ಮೇಲೆ, ಮದುವೆ ಗಂಡಿನಂತೆ ಆದರೆ ಹಳೇ ಮದುವೆ ಗಂಡಿನಂತೆ ಸೂತ್ರಧಾರ ಬಂದು, ಪ್ರಾರ್ಥನಾ ಗೀತೆಯನ್ನು ಹಾಡಲು ಶುರುಮಾಡಿದ.

ಆಗ ಪೋಲೀಸ್ ಅಸಿಸ್ಟೆಂಟ್ ಸೂಪರಿಂಟೆಂಡೆಂಡ್ ರಂಗೇಗೌಡರು ನಿಧಾನ ವಾಗಿ ಬಂದು ಸೋಫಾದಮೇಲೆ ಕುಳಿತರು.

ತಿಮ್ಮಯ್ಯ ತಲೆ ತಗ್ಗಿಸಿದ. 'ಲ್ರ್ರೋ' ರಾಮೇಗೌಡನ ಸೊಸೆ ನನ್ನ ಹೆಂಡತಿಯ ಸ್ನೇಹಿತೆ! ಆ ಸೊಸೆಯ ತಮ್ಮ ರಂಗೇಗೌಡ! ಅವನೇ ಬಂದಿದಾನೆ ಕಣೋ— ಅವಳು ನಾಗವೇಣಿಯೇ ಇರಬೇಕೋ! ಎಂದ ಪಿಸುಮಾತಿನಲ್ಲಿ. ಮಾಸ್ತರ ಶಿಂಗಪ್ಪ, ಹೌದು ಕಣೋ ನಿನ್ನ ಗುಮಾನಿ ಖರೇವು ಅಂದ. ಶ್ಯಾನುಭೋಗ ಶೀನಪ್ಪ ಒಂಟಿ ಸೀನು ಸೀನಿದ. ನಂತರ ಅಂದ, "ಎಲ ಎಲಾ ಏನು ಮಾಯವೋ ಈ ಹೆಂಗಸರದು! ಈಗ ಅವರ ಕಣ್ಣಿಗೆ ಸಿಕ್ಕದಹಾಗೆ ತಲೆ ಮರೆಸಿಕೊಳ್ಳಬೇಕು ನಾವು" ಎಂದೂ ಸೇರಿಸಿದ.

ನಾಟಕ ಬಲು ಚೆನ್ನಾಗಿತ್ತು. ಚಪ್ಪಾಳೆ ಮೇಲೆ ಚಪ್ಪಾಳೆಮಳೆ ಸುರಿಸಿ ಪ್ರಧಾನ ನಟ ನಟಿ ವಿದೂಷಕರಿಂದ ತಿರುಗಿ ತಿರುಗಿ ಹಾಡನ್ನು ಹೇಳಿಸಿದರು, ಪ್ರೇಕ್ಷಕರು. ಆದರೂ ತಿಮ್ಮಯ್ಯನಿಗೆ ನಾಟಕ ಬಲು ಹುಳಿಯಾಗಿ ಕಾಣಿಸಿತು. ವಿದೂಷಕನ ಹಾಸ್ಯವೆಲ್ಲಾ ಕಹಿಯಾಗೇ ಕೇಳಿಸಿತು.

ನಾಟಕ ಮುಗಿಯಬೇಕು. ಇನ್ನೊಂದು ಅಂಕವಿದೆ. ನಂತರ ಮಂಗಳ. ಆಗ ರಂಗಮಂಟಪದ ಮೇಲೆ ನಾಟಕದ ಕಂಪೆನಿಯ ಮಾಲೀಕ, ಜನತೆಗೆ ಧನ್ಯವಾದವನ್ನು ಅರ್ಪಿಸಲು, ಹಾಗೂ ಜಾಹಿರಾತುಮಾಡಿ ಇದೇ ರೀತಿ ನೀವು ರಾತ್ರಿ ಬಂದು, ತಿಗಣೆ ಗಳಿಂದ ಕಚ್ಚಿಸಿಕೊಂಡು, ಬಾಯಿ ಬಿಟ್ಟುಕೊಂಡು, ಕಿಸೆಯ ಕಾಸನ್ನು ನಮ್ಮ ಹೊಟ್ಟೆಪಾಡಿಗೆ, ಬಟ್ಟೆಪಾಡಿಗೆ ಕೊಡಿ ಎಂದು ವಿನಯದ ವಿನಂತಿ ಮಾಡಿಕೊಳ್ಳು ತ್ತಿದ್ದಾಗಲೇ, ಜಿಂಕ್‌ಷೀಟಿನ ಮೇಲ್ಛಾವಣಿಯಮೇಲೆ, ಸಹಸ್ರ ಟೈಪ್‌ರೈಟರುಗಳನ್ನು ಸಹಸ್ರಮುಖಿಯರು ಟಕಟಕ ಮಾಡಿದಂತೆ, ಮಳೆಯ ಹನಿ ಬೀಳಲಾರಂಭಿಸಿತು. ಜನತೆಯ ಪುಣ್ಯದಿಂದ, ಆ ಮಾಲೀಕನ ಮಾತುಗಳು ಸ್ವಚ್ಛವಾಗಿ ಕೇಳಿಸಲಿಲ್ಲ.

ಕಡೆಯ ಅಂಕ ಆಯಿತು. ಮಂಗಳ ಹಾಡಿದ್ದಾಯಿತು. ರಾಷ್ಟ್ರಗೀತೆ ಹಾಡಲು ಆರಂಭವಾಯ್ತು.

ತಿಮ್ಮಪ್ಪ ಮತ್ತು ಸ್ನೇಹಿತರು ಬೇಗ ಹೊರಬೀಳೋಣ, ಸೋಫಾದವರ ಕಣ್ಣಿಗೆ ಕಾಣದೆ ಮಾಯವಾಗೋಣ, ಎಂಬ ಆತುರದಿಂದ ಓಡಿಯೇ ಬಿಟ್ಟರು. ಆದರೆ ಬಾಗಿಲಲ್ಲಿದ್ದ ಪೋಲೀಸ್ ಕಾನ್‌ಸ್ಟೆಬಲ್ಲು ರಾಷ್ಟ್ರಗೀತೆ ಹಾಡುವಾಗ ನಿಮಿರಿ ನಿಲ್ಲದೆ ಅಲುಗಾಡುತ್ತಿದ್ದೀರಿ! ಇದು ರಾಷ್ಟ್ರಕ್ಕೆ ಅವಮಾನ, ನೀವು ಶಿಕ್ಷೆಗೆ ಗುರಿಯಾಗಬೇಕು, ಎಂದು ಇವರುಗಳನ್ನು ತಡೆದು ನಿಲ್ಲಿಸಿದ.

ರಾಷ್ಟ್ರಗೀತೆ ಮುಗಿಯಿತು. ಜನತೆಯು ಹೊರಬೀಳಲು ಶುರುವಾಯ್ತು. ತಿಮ್ಮಪ್ಪನ ಸ್ನೇಹಿತರು ಆ ಗುಂಪಿನಲ್ಲಿ ಮಾಯವಾದರು. ತಿಮ್ಮಪ್ಪನ ಕೈಯನ್ನು ಆ ಪೋಲೀಸ್ ಕಾನ್‌ಸ್ಟೆಬಲ್ ಹಿಡಿದಿದ್ದನಾದಕಾರಣ ಆತ ಕಂಭದ ಪಕ್ಕದಲ್ಲೇ ಪ್ರತ್ಯಕ್ಷ ನರಸಿಂಹನಂತೆ ನಿಂತೇ ಇದ್ದ.

ಮೊದಲ ಕ್ಲಾಸಿನವರು ಹೊರಬಿದ್ದಾಗ, ಪೋಲೀಸ್ ಸೂಪರಿಂಟೆಂಡೆಂಟರ ಮುಖವನ್ನು ನೋಡಿ ಪೋಲೀಸ್‌ಕಾನ್‌ಸ್ಟೇಬಲ್ ೧ ರೂಪಾಯಿನ ಬಾಗಿಲಲ್ಲಿದ್ದರೂ ನಿಮಿರಿ ನಿಂತು ಕೈ ಕರಿಸಿ ಸಲಾಂ ಹಾಕಿದ. ತಿಮ್ಮಪ್ಪನ ಕೈ ಬಿಟ್ಟಿತು. ತಿಮ್ಮಪ್ಪ ಓಡಿಯೇ ಬಿಟ್ಟ, ಕಾನೂನಿನ ಭಯ ಅವನಿಗಿತ್ತಿಲ್ಲ, ನಾಗವೇಣಿಯು, ಮತ್ತು ಅವಳ ಸ್ನೇಹಿತೆಯ ತಮ್ಮನ ಭೇಟಿ ಭಯಂಕರವಾಗಿತ್ತು ಆಗ.

ಆದರೆ ಹೊರಗೆ ಭಾರಿ ಮಳೆ. ಎಲ್ಲಿ ಹೋಗುವುದು?

ರಂಗೇಗೌಡ, ಅವನ ತಂಗಿ, ತಂಗಿಯ ಅತ್ತೆ, ನಾಗವೇಣಿ ಎಲ್ಲರೂ, ಅಲ್ಲಿಯೇ ಬಂದು ನಿಂತಿದ್ದ ಮೋಟಾರಿನಲ್ಲಿ ಕುಳಿತರು. ಹೊರಟರು. ಹೊರಡುವಾಗ, ರಂಗೇ ಗೌಡನಿಗೆ ಅವನ ಅಕ್ಕ, "ರಂಗೂ! ನೀನು ಮನೆಯಲ್ಲಿಳಿದು ನಮ್ಮನ್ನು ಈಗಲೇ ಹಳ್ಳಿಗೆ ಕಳಿಸಬೇಕು. ಮನೆಯಲ್ಲಿ ಯಾರೂ ಇಲ್ಲ ಎಂದು ಹೇಳಿದುದು, ಕಂಭದ ಮರೆಯಲ್ಲಿದ್ದ ತಿಮ್ಮಪ್ಪನಿಗೆ ಕೇಳಿಸಿತು.

*　　　*　　　*

ಭಾನುವಾರ ಸಂಜೆ ಬಸ್ಸಿನಲ್ಲಿ ತಿಮ್ಮಪ್ಪ ಹಳ್ಳಿಗೆ ಹಿಂತಿರುಗಿದ. "ಏನೂ ಅಂದ್ರೆ ಪಹರಿನ ತುರ್ತು ಕೆಲಸವೆಲ್ಲಾ ಸಾಂಗವಾಗಿ ನಡೆಯಿತೇ? ಎಷ್ಟು ದಣಿದಿದ್ದೀರೋ! ಪಾಪ!" ಎಂದು ನಾಗವೇಣಿ ಸ್ವಾಗತಿಸಿದಳು.

"ಹೌದು! ನಾಗವೇಣೀ! ಪಹರಿನಲ್ಲಿ ಬಲು ಸುಸ್ತಾದೆ!" ಅಂದ ತಿಮ್ಮಪ್ಪ ಮುಗುಮ್ಮಾಗಿ.

"ನಂಬಬಾರದು ಈ ಹೆಂಗಸರನ್ನು" ಎಂದ ತಿಮ್ಮಪ್ಪ ನಾಗವೇಣಿ ನಡೆದುದೆಲ್ಲ ವನ್ನೂ ಉಂಡು, ತಂಬೂಲ ಹಾಕಿಕೊಂಡು ಮಲಗುವಾಗ ಹೇಳಿದಾಗ.

— ಪ್ರಕಾಶ್.

---

## ನವೆಂಬರ್ ತಿಂಗಳಲ್ಲಿ ಪ್ರದರ್ಶನ

ಅನ್ನಮದ, ಅರ್ಥಮದ, ಅಖಿಲ ವೈಭವದ ಮದ, ಮುನ್ನ ಪ್ರಾಯದ ಮದವು, ರೂಪ ಮದವು,
ತನ್ನ ಸತ್ವದ ಮದ, ಧಾತ್ರಿ ವಶನಾದ ಮದ, ಇನ್ನು ತನಗೆದುರಿಲ್ಲವೆಂದೆಂಬ ಮದದಿಂಹ
ಮೆರೆಯುತ್ತಿದ್ದ ಮೂರ್ಖ ಕೈವಲ್ಯ ಸಾಧಿಸಿದ—ಅದು ಹೇಗೆ?
ಅದಕ್ಕೆ ಉತ್ತರ

**ಜಗನ್ನಾಥ್ ಪ್ರೊಡಕ್ಷನ್ಸ್‌ರವರ—**



# ಭಕ್ತ ವಿಜಯ (ಕನ್ನಡ)



**[ಭಕ್ತ ಸಂತೋಬನ ಕಥೆ]**



★ ಪಂಡರಿಬಾಯಿ
★ ಮೈನಾವತಿ,
★ ರಾಜಕುಮಾರ್
★ ಡಿಕ್ಕಿ ಮಾಧವರಾವ್
★ ವಿಮಲಾನಂದದಾಸ್
★ ಸಿ. ಟಿ. ಶೇಷಾಚಲಂ
ಮುಂತಾದವರು

| ನಿರ್ಮಾಪಕ : | ಸ್ಟುಡಿಯೋ : | ನಿರ್ದೇಶನ : |
|---|---|---|
| **ಪಿ. ಕೆ. ಜನಾರ್ಧನ್** | **ಫಿಲಿಂ ಸೆಂಟರ್** | **ಎ. ಕೆ. ಪಟ್ಟಾಭಿ** |

Distributors for :

| Mysore State, Coorg and South Canara | Bombay Presidency and Hyderabad State |
|---|---|
| **Sri Raghavendra Pictures,** BANGALORE-9 | **Film Centre (Private) Ltd.,** VADAPALANI POST. MADRAS-26 |

For other particulars contact :

**JAGANNATH PRODUCTIONS,**

8, SIVA KOIL STREET, KODAMBAKKAM, MADRAS-24.









# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್‌ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.



**ತಯಾರಕರು :**

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ ಲಿಮಿಟೆಡ್,**

**ಮಲ್ಲೇಶ್ವರಂ - - - ಬೆಂಗಳೂರು ೩.**










## ಷಾಲಿಮಾರ್ ವುಡ್‌ಕೋಟ್

**ರೆಡಿಮಿಕ್ಸ್ಡ್ ಪೆಯಿಂಟ್**

ಒಳ್ಳೇ ಹೊಳಪಿರುವ, ಬಹಳ ಬಾಳಿಕೆಯುಳ್ಳ ರೆಡಿಮಿಕ್ಸ್ಡ್ ಬಣ್ಣ

## ಷಾಲಿಮಾರ್ ಲಸ್ಟ್ರಾಲ್

**ಅಲ್ಯೂಮಿನಿಯಂ ಪೆಯಿಂಟ್**

ವಿಸ್ತಾರ ಮೇಲ್ಮೈ ಪ್ರಸರಣ ಶಕ್ತಿಯುಳ್ಳದ್ದು

## ಷಾಲಿಮಾರ್ ಮ್ಯಾಟ್‌ಕೋಟ್

**ಫ್ಲಾಟ್ ವಾಲ್ ಪೆಯಿಂಟ್**

ಒಳಭಾಗದ ಗಾರೆ, ಕಾಂಕ್ರೀಟು, ಮತ್ತು ಮರಕ್ಕೆ ಹಿಡಿಯುವುದು. ಬಾಳಿಕೆವುಳ್ಳದ್ದು.

**ಅತ್ಯುತ್ತಮವಾದ ಸಕಲಕಾರ್ಯಗಳಿಗೂ ಉಪಯೋಗಿಸಬಹುದಾದ ಎನಾಮೆಲ್**

ಅನೇಕ ತರದ ಕೈಗಾರಿಕೆ ಮತ್ತು ಮನೆಕೆಲಸಗಳಿಗೆ ಉಪಯೋಗಕ್ಕೆ ಬೀಳುವುದಲ್ಲದೆ ಯಾವುದರಮೇಲೂ ಬಳಿಯಬಹುದು. ಬ್ರಷ್ಷಿನಿಂದ ಬಳಿಯಬಹುದು, ಸ್ಪ್ರೇ ಮಾಡಬಹುದು ಅಥವಾ ಬಣ್ಣದಲ್ಲಿ ಅದ್ದಲೂಬಹುದು; ಆಗಿಂದಾಗ್ಗೆ ತೊಳೆದರೂ ಬಣ್ಣ ನಿಲ್ಲುವುದು

**ಷಾಲಿಮಾರ್ ಸೂಪರ್‌ಲ್ಯಾಕ್**







**SHALIMAR PAINT COLOUR & VARNISH CO., PRIVATE LTD.,**

"Karim Manzil" Kumbargundi Road, Bangalore City.

Telephone No, 3607

SPW 326

